# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಸಾಧಾರಣವಾಗಿ ಒಂದು ಕುಟುಂಬದಲ್ಲಿ ಹಿರಿಯರಾದವರು ವೃದ್ಧರಾಗುತ್ತಾ ಬಂದಹಾಗೆ, ತಮ್ಮ ಹಕ್ಕು ಬಾಧ್ಯತೆಗಳ ಲೆಕ್ಕಕ್ಕೆ ತೊಡಗುತ್ತಾರೆ. ಆಗ ಅವರಿಗೆ ತಿಳಿಯದಂತೆ ಸ್ವಾರ್ಥವೇ ತಲೆಯೆತ್ತಿ ಹಕ್ಕಿನ ಲೆಕ್ಕ ಹಾಕುತ್ತಾರೆಯೇ ಹೊರತು, ಹಿರಿಯರ ತಲೆ ಕೋರೆಯುವ ಮುಖ್ಯ ಬಾಧ್ಯತೆಯನ್ನು ತೇಲಿಸಿ ಸರಿಸಿ ಕೊಳ್ಳುತ್ತಾರೆ. ಹಿರಿಯರಿಗೆ ಅವೆರಡೂ ಜಂಟಿ ಪದಗಳಂತೆ ಸಮಾನವಾಗಿಯೇ ಕಾಣುತ್ತಿರುತ್ತವೆ. ಆ ಸಮಾನತೆಯನ್ನು ಉಳಿಸಿಕೊಳ್ಳಲು ಪರೀಕ್ಷಿಸಿ ನೋಡುವ, ಒಬ್ಬ ಹಿರಿಯನ ಸಣ್ಣದೊಂದು ಕಥೆ ಈ ಸಂಚಿಕೆಯ "ಬಾಧ್ಯತೆ ತಿಳಿದವನು"

## ಅಮರವಾಣಿ

**ಭೀತಿದಃ ಸುಜನೋಽಪಿಸ್ಯಾತ್ ಯದಿ ದುರ್ಜನ ಸೇವಿತಃ**
**ಪನ್ನಗಸ್ಯಾಶ್ರಯಂ ವೃಕ್ಷಂ ಚಂದನಂ ಕಃ ಸಮಾಶ್ರಯೇತ್**

ದುರ್ಜನನಿಗೆ ಆಶ್ರಯವನ್ನಿತ್ತ ಸಜ್ಜನನನ್ನು ನೋಡಿ ಪರರು ಹೆದರುವರು. ಚಂದನ ವೃಕ್ಷವು ಹಾವಿಗೆ ಆಶ್ರಯವಾದುದರಿಂದಲೇ ಅದರ ನೆರಳಿನಲ್ಲಿ ಯಾರೂ ವಿಶ್ರಮಿಸುವುದಿಲ್ಲ.

ಸಂಪುಟ: ೭ ಜನವರಿ '೮೪ ಸಂಚಿಕೆ: ೧

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ಅತಿ ವೇಗವಾಗಿ ಪಯಣಿಸುವ ಚಂದ್ರ

ನಮಗೆ ಕಾಣುವ ಚಂದ್ರನಿಗಿಂತಲೂ ಮೂರು ಸಾಲು ಹೆಚ್ಚಿನ ವೇಗದಿಂದ ಪಯಣಿಸುವ ಒಂದು ಚಂದ್ರವು ನಮ್ಮ ಸೂರ್ಯಮಂಡಲದಲ್ಲಿರುವಂತೆ ಇತ್ತೀಚೆಗೆ ತಿಳಿದು ಬಂದಿದೆ. ಏಳು ಗಂಟೆಗಳಿಗೊಂದು ಸಾರಿ ಗುರುಗ್ರಹವನ್ನು ಸುತ್ತಿ ಬರುವ ಈ ಚಂದ್ರವು, ಗಂಟೆಗೆ ಎಪ್ಪತ್ತು ಸಾವಿರದ ನಾನ್ನೂರು ಮೈಲು ವೇಗದಲ್ಲಿ ಪ್ರಯಾಣ ಮಾಡುತ್ತದಂತೆ !

## ಬೆರ್ಮೂಡಾ ಟ್ರಯಾಂಗಲ್ ನಿಗೂಢಮರ್ಮ

ಪಶ್ಚಿಮ ಅಟ್ಲಾಂಟಿಕ್ ಮಹಾಸಮುದ್ರದಲ್ಲಿ ಬೆರ್ಮೂಡಾ ಫ್ಲೋರಿಡಾ ನಡುವೆ ಬೆರ್ಮೂಡಾ ಟ್ರಯಾಂಗಲ್ ಎಂಬ ಪ್ರಾಂತವಿದೆ. ಈ ಪ್ರಾಂತವನ್ನು ಸಮೀಪಿಸುವ ಹಡಗುಗಳೂ, ವಿಮಾನಗಳೂ ಅದೃಶ್ಯವಾಗಿ ಹೋಗುತ್ತವೆ. ಥಕ್ಕನೆ ನೂರಡಿಗಳಷ್ಟೆತ್ತರಕ್ಕೆ ಏರುವ ಭರತದ ಉಬ್ಬರವೇ ಹಡಗುಗಳನ್ನು ಕಬಳಿಸುತ್ತದೆಂದು ಕೆನಡಾದ ನೇಷನಲ್ ರಿಸರ್ಚ್ ಕೌನ್ಸಿಲಿಗೆ ಸೇರಿದ ಜೋಫ್ಲೋಗ್ ಅಭಿಪ್ರಾಯ ಪಡುತ್ತಾನೆ. ಹಾಗಾದರೆ ವಿಮಾನಗಳನ್ನು ಕೂಡಾ ಈ ಉಬ್ಬರವೇ ನಾಶಮಾಡುವುದೋ ಎಂಬುದು ನಿಗೂಢಮರ್ಮವೇ ಆಗಿದೆ.





## ನೂತನ ವಿನೋದದಲ್ಲಿ ರಿಕಾರ್ಡ್

ಇಂಗ್ಲಾಂಡಿನ ಯಾರ್ಕ್‌ಷೈರ್‌ನಲ್ಲಿರುವ ಎಪ್ಪತ್ತನಾಲ್ಕು ವಯಸ್ಸಿನ ರೆಗ್ ಮೆಲ್ಲರ್ ಎಂಬ ದೊಡ್ಡ ಮನುಷ್ಯನು ನೂತನವಾದೊಂದು ವಿನೋದದಲ್ಲಿ ಹೊಚ್ಚ ಹೊಸ ರಿಕಾರ್ಡ್ ಸೃಷ್ಟಿಸಿದನು. ಸೂಜಿಯಂತಹ ಉಗುರುಗಳೂ ಗರಗಸದಂತಹ ಹಲ್ಲುಗಳೂ ಇರುವ ಮುಂಗುಸಿಯಂತಹ ಕಾಡು ಬೆಕ್ಕುಗಳಿಂದ ಬಿಡುವಿಲ್ಲದಂತೆ ಐದು ಗಂಟೆ ಇಪ್ಪತ್ತಾರು ನಿಮಿಷಗಳವರೆಗೆ ಕಚ್ಚಿಸಿಕೊಂಡನಂತೆ ರೆಗ್ ಮೆಲ್ಲರ್. ಯಾರ್ಕ್ ಷೈರ್ ಪ್ರಜೆಗಳಲ್ಲಿ ಈ ಕಾಡು ಬೆಕ್ಕುಗಳಿಂದ ಎಷ್ಟು ಹೊತ್ತು ಕಚ್ಚಿಸಿಕೊಳ್ಳಬಲ್ಲನೆಂಬುದು ಹೊಚ್ಚ ಹೊಸ ವಿನೋದವಾಗಿ ಪ್ರಬಲಿಸಿಕೊಂಡಿದೆ.

# ನಿಮಗೆ ಗೊತ್ತೇ?

೧. ಪ್ರಪಂಚದೊಳಗೆಲ್ಲಾ ಅತಿ ಪ್ರಾಚೀನವಾದ ವೃಕ್ಷ ಎಲ್ಲಿದೆ ?

೨. ಎರಡು ಸಾವಿರ ವರ್ಷಗಳ ಕೆಳಗೆ ಭಾರತ ದೇಶದಿಂದ ಕಸಿಕಟ್ಟಿಕೊಂಡೊಯ್ದು ನೆಟ್ಟ ವೃಕ್ಷ ಯಾವುದು ? ಎಲ್ಲಿದೆ ?

೩. ಪ್ರಪಂಚದೊಳಗೆಲ್ಲಾ ಅತಿ ದಪ್ಪವಾದ ವೃಕ್ಷ ಎಲ್ಲಿದೆ ಗೊತ್ತೇ ?

೪. ನೋಡುತ್ತಿದ್ದ ಹಾಗೆ ಬೆಳೆಯುವ ಮರ ಯಾವುದೆಂದು ನಿಮಗೆ ಗೊತ್ತೇ ?

೫. ಒಂದೇ ಕಾಂಡದಿಂದ ವಿಶಾಲವಾದ ಸ್ಥಳವನ್ನು ಆಕ್ರಮಿಸಿಕೊಂಡ ವೃಕ್ಷ ಯಾವುದು ? ಎಲ್ಲಿದೆ ?

(ಉತ್ತರ ೬೪ ನೇ ಪುಟದಲ್ಲಿ)



# ಬಾಧ್ಯತೆ ತಿಳಿದವನು

ಆನಂದ ಪುರದ ಜಮೀನ್ದಾರರಾದ ಆನಂದ ನಾರಾಯಣರಿಗೆ ವೃದ್ಧಾಪ್ಯವು ಮುಂದುವರಿದುಕೊಂಡಿತ್ತು. ಹೆಚ್ಚಿನ ಚಿಂತೆಯಿಲ್ಲದೆ ಅವರ ಕಾಲ ಕಳೆದಿತ್ತು. ಮೂವರು ಗಂಡು ಮಕ್ಕಳು ಹುಟ್ಟಿದ ಮೇಲೆ ಕಡೆಗೆ ಒಬ್ಬಳು ಮಗಳೂ ಹುಟ್ಟಿದ್ದಳು. ಮಗಳ ಹೆಸರು ಸುವರ್ಣ.

ಈಗ ಅವರಿಗೆ ಒಂದು ಚಿಂತೆ ಹಿಡಿದಿದ್ದಿತು. ತನ್ನ ಆಸ್ತಿಯೊಂದಿಗೆ ಮಗಳಿಗೆ ಮದುವೆ ಮಾಡುವ ಬಾಧ್ಯತೆಯನ್ನು ಕೂಡಾ ಮಗಂದಿರಿಗೆ ಹಂಚಿಕೊಡುವುದು ಒಳ್ಳೆಯದೆಂದು ಅವರಿಗೆ ತೋರುತ್ತಿತ್ತು. ಅವರೇನೋ ತನ್ನ ಕುಮಾರಿಗೆ ಸಂಬಂಧವನ್ನು ನೋಡುತ್ತಿದ್ದರಾಗಲಿ, ಯಾವುದೂ ಅವರಿಗೆ ಹಿಡಿಸುವಂತಹುದು ಬರಲಿಲ್ಲ.

ತನ್ನ ಮಗಂದಿರಲ್ಲಿ ತಂಗಿಯ ಮದುವೆಯ ಬಾಧ್ಯತೆ ತೆಗೆದುಕೊಳ್ಳುವವನಾರೆಂದು ನೋಡಲು, ಒಂದು ಆಲೋಚನೆ ಮಾಡಿದರು. ಅದರಂತೆ ಒಂದು ದಿನ ಶ್ರೀಕಾಂತನೆಂಬ ತನ್ನ ಹಿರಿಯ ಮಗನನ್ನು ತನ್ನ ಬಳಿಗೆ ಕರೆದು, "ನೋಡಪ್ಪಾ ಶ್ರೀಕಾಂತಾ, ಒಂದು ಮುಖ್ಯ ಕಾರ್ಯವಾಗಬೇಕಾಗಿದೆ. ನನ್ನ ಯಾವತ್ತೂ ಆಸ್ತಿಯನ್ನು ನಾಲ್ಕು ಭಾಗಗಳಾಗಿ ವಿಭಜನೆ ಮಾಡಿ ನೀವು ನಾಲ್ವರಿಗೂ ಸಮಾನವಾಗಿ ಹಂಚಿಕೊಡ ಬೇಕೆಂದಿದ್ದೇನೆ. ಸುವರ್ಣಳಿಗೆ ಒಳ್ಳೆಯ ಸಂಬಂಧವನ್ನು ನೋಡಿ, ನೀನೇ ಅವಳಿಗೆ ವೈಭವದಿಂದ ಮದುವೆ ಮಾಡಬೇಕು. ಏನನ್ನುವಿ ? " ಎಂದರು ಆನಂದ ನಾರಾಯಣರು.

ಅದನ್ನು ಕೇಳಿ ಶ್ರೀಕಾಂತನು ಬಹಳ ವಿನಯದಿಂದ, " ಹಾಗೆಯೇ ಮಾಡಿರಿ ಅಪ್ಪಾ. ನಾಲ್ಕು ಭಾಗಗಳಾಗಿ ಮಾಡುವುದಕ್ಕೆ ಬದಲು ಮೂರು ಭಾಗಗಳಾಗಿ ವಿಭಜಿಸಿಬಿಡಿರಿ, ಸಾಕು. ನಾವು ಅಣ್ಣ ತಮ್ಮಂದಿರು ಮೂವರೂ ಕೂಡಿ, ಸುವರ್ಣಳಿಗೆ ಒಳ್ಳೆಯ ಸಂಬಂಧ ನೋಡಿ, ಮದುವೆಯ ಖರ್ಚುಗಳನ್ನೂ ಭರಿಸಿಕೊಳ್ಳುತ್ತೇವೆ. ಆಮೇಲೆ ಅವಳನ್ನು ಅತ್ತೆ ಮನೆಗೆ ಕಳಿಸುತ್ತೇವೆ. ಅಷ್ಟೇ ತಾನೇ ಅಪ್ಪಾ " ಎಂದನು.

ಆನಂದ ನಾರಾಯಣರು ತಲೆಯಾಡಿಸಿ, " ನನಗಂತೂ ಸುವರ್ಣಳಿಗೆ ತಕ್ಕ ಸಂಬಂಧವು ಕೂಡಿ ಬರಲಿಲ್ಲ. ನಾನು ಬದುಕಿರುವಾಗ ಹುಡುಗಿಯ ಮದುವೆ ನೋಡುವೆನೋ ಇಲ್ಲವೋ ? " ಎಂದರು.

ಬಿ. ಎ. ರಾವ್



ಶ್ರೀಕಾಂತನು ಸಮಾಧಾನ ಹೇಳುವ ಧೋರಣೆಯಲ್ಲಿ, "ನಿಮಗೆ ಆ ಚಿಂತೆಯೇ ಬೇಡ ಅಪ್ಪಾ. ನಾನೂ ತಮ್ಮಂದಿರೂ ಕೂಡಿ ಒಳ್ಳೆಯ ಸಂಬಂಧ ನೋಡಿ, ತಂಗಿಯ ಮದುವೆಯನ್ನು ದೊಡ್ಡ ರೀತಿಯಲ್ಲಿ ಮಾಡಿಬಿಡುತ್ತೇವೆ. ಆಮೇಲೆ ಅವಳ ಭಾರ ಯಾರಿಗೂ ಇಲ್ಲವಷ್ಟೇ? ಆಸ್ತಿ ವಿಭಾಗ ಮಾತ್ರ ನಾನು ಹೇಳಿದ ಹಾಗೆಯೇ ಮಾಡಿದರೆ ಚೆನ್ನಾಗಿರುತ್ತದೆ. ಈ ವಿಷಯದಲ್ಲಿ ನೀವು ಅವಸರಪಡದೆ ನಿಧಾನವಾಗಿ ಆಲೋಚಿಸಿ ನೋಡಿರಿ. ನಿಮಗೇ ಗೊತ್ತಾಗುತ್ತದೆ" ಎಂದನು.

ಆನಂದ ನಾರಾಯಣರು ಅವನನ್ನು ಕಳುಹಿಸಿ, ಎರಡನೇ ಮಗ ಶ್ರೀನಿವಾಸನನ್ನು ಕರೆಯಿಸಿಕೊಂಡರು. ಅವನೊಂದಿಗೆ ಕೂಡಾ ಶ್ರೀಕಾಂತನ ಹತ್ತಿರ ಹೇಳಿದ ಹಾಗೆಯೇ ಹೇಳಿ. "ನಿಮ್ಮ ತಂಗಿಯ ಮದುವೆ ಕಣ್ಣು ತುಂಬಾ ನೋಡಬೇಕೆಂದು ನನಗೆ ಬಹಳ ಆಶೆಯಾಗಿದೆಯಪ್ಪಾ" ಎಂದರು.

"ಹಾಗೆಯೇ ಮಾಡಿದರಾಯಿತು ಅಪ್ಪಾ. ತಪ್ಪದೆ ಒಳ್ಳೆಯ ಸಂಬಂಧವನ್ನು ನೋಡಿ ಅವಳಿಗೆ ಮದುವೆ ಮಾಡುತ್ತೇವೆ. ಆದರೆ ಆಸ್ತಿಯ ವಿಷಯದಲ್ಲಿ ನೀವು ಹೇಳಿದ ಹಾಗೆ ಮಾಡುವುದರ ಬದಲಿಗೆ, ನನಗೆ ಕಾಣುವ ಹಾಗೆ ಸ್ವಲ್ಪ ಬದಲಾವಣೆ ಮಾಡಿದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ" ಎಂದನು ಶ್ರೀನಿವಾಸ.

"ಹೇಗೆ ಮಾಡಿದರೆ ಚೆನ್ನಾಗಿರುತ್ತದೆ? ಹೇಳು ಕೇಳೋಣ" ಎಂದರು ಆನಂದ ನಾರಾಯಣರು.

"ಆರು ಭಾಗ ಮಾಡುವುದೇ ಒಳ್ಳೆಯದು" ಎಂದನು ಶ್ರೀನಿವಾಸ.

"ಆರು ಭಾಗಗಳೇ? ಏಕೆ ಹೀಗೆ ಹೇಳುವಿ?" ಎಂದು ಆಶ್ಚರ್ಯದಿಂದ ಕೇಳಿದರು ಆನಂದ ನಾರಾಯಣರು.

ಆರನೇ ಭಾಗವು ತನ್ನ ಶೇಷ ಜೀವಿತವನ್ನು ಕಳೆಯಲು ಉಪಯೋಗ ಬೀಳುತ್ತದೆಂದು ಹೇಳುವನೇನೋ ಅಂದುಕೊಂಡರು ಜಮೀನ್ದಾರರು. ಆದರೆ ಅವನು ಹಾಗೇನೂ ಹೇಳದೆ, ಅವರಿಗೆ ಇನ್ನಷ್ಟು ಆಶ್ಚರ್ಯವಾಗುವ ಹಾಗೆ ವಿಭಾಗದ ಕ್ರಮವನ್ನು ಕುರಿತು ಹೇಳಿದನು.

"ಅಪ್ಪಾ, ಸುವರ್ಣಳಿಗೆ ಮದುವೆ ಮಾಡಿದ ಮಾತ್ರಕ್ಕೆ ನಮ್ಮ ಬಾಧ್ಯತೆ ತೀರಿ ಹೋಗುವುದೇನಿಲ್ಲವಷ್ಟೆ? ಅವಳಿಗೆ ಮದುವೆಯಾದ ಮೇಲೆ ತೌರು ಮನೆಯ ಮರ್ಯಾದೆಗಳಿಗಾಗಿ, ಇನ್ನೂ ಪ್ರಸವ, ಬಾಣಂತನ, ಮೊದಲಾದವುಗಳಿಗಾಗಿ, ಬರುತ್ತಾ ಹೋಗುತ್ತಾ ಇರುತ್ತಾಳಷ್ಟೆ? ಆಸ್ತಿಯಲ್ಲಿ ಪ್ರತ್ಯೇಕವಾಗಿರಿಸಿದ ಆರನೇ ಭಾಗವು ಅಂತಹ ಖರ್ಚುಗಳಿಗಾಗಿ ಇರುತ್ತದೆ. ಅದು ಒಳ್ಳೆಯದಲ್ಲವೆ?" ಎಂದನು ಶ್ರೀನಿವಾಸ.

ಆನಂದ ನಾರಾಯಣರು ಅದಕ್ಕೇನೂ ಹೇಳದೆ ತಲೆಯಲುಗಿಸಿ, ಶ್ರೀನಿವಾಸನನ್ನು ಕಳುಹಿಸಿ,

ಮೂರನೇ ಮಗನನ್ನು ಕರೆಯಿಸಿಕೊಂಡರು. ಅವನ ಹೆಸರು ಶ್ಯಾಮಳನೆಂದು.

ಜಮೀನ್ದಾರರು ಆಸ್ತಿಯ ಹಂಚುವಿಕೆಯನ್ನು ಕುರಿತು ಅವನೊಡನೆ ಹೇಳಿ, "ಆಸ್ತಿಯನ್ನು ನಾಲ್ಕು ಭಾಗಗಳಾಗಿ ಮಾಡುವುದು ನಿನಗೆ ಇಷ್ಟವೇನಾ?" ಎಂದು ಕೇಳಿದರು.

"ನನಗೇನೂ ಇಷ್ಟವಿಲ್ಲ ಅಪ್ಪಾ" ಎಂದನು ಶ್ಯಾಮಳ.

"ಇಷ್ಟವಿಲ್ಲವೆ? ಅದೇಕಪ್ಪಾ? ಇಷ್ಟವಿಲ್ಲವೆಂದು ಏಕೆ ಹೇಳುವಿ?" ಎಂದು ಶ್ಯಾಮಳನನ್ನು ಅನುಮಾನದಿಂದ ನೋಡಿದರು ಜಮೀನ್ದಾರರು.

"ಈಗ ಆಸ್ತಿಯನ್ನು ವಿಭಜನೆ ಮಾಡಬೇಕಾದ ಅಗತ್ಯವೇನು ಬಂದಿದೆ ಅಪ್ಪಾ?" ಎಂದು ಪ್ರಶ್ನಿಸಿದನು ಶ್ಯಾಮಳ.

"ನಾನು ಇನ್ನು ಹೆಚ್ಚು ಕಾಲ ಬದುಕಲಾರೆನೆನಿಸುತ್ತದಪ್ಪಾ. ನಾನು ಬದುಕಿರುವಾಗಲೇ ಎಲ್ಲವನ್ನೂ ನೀವು ನಾಲ್ವರಿಗೂ ನ್ಯಾಯವಾಗಿ ಹಂಚಿಕೊಟ್ಟು ಬಿಡಬೇಕೆಂದಿದ್ದೇನೆ. ನಾನು ಹೋದ ಮೇಲೆ ಆಸ್ತಿಗಾಗಿ ನೀವು ಜಗಳಾಡಿಕೊಳ್ಳಬಾರದೆಂಬುದು ನನ್ನ ಇಚ್ಛೆ" ಎಂದರು ಜಮೀನ್ದಾರರು.

"ಅಷ್ಟರಮಟ್ಟಿಗೆ ಈಗೇನೂ ಆಗಲಿಲ್ಲಪ್ಪಾ. ನೀವು ಇನ್ನೂ ಹತ್ತು ವರ್ಷ ಆರೋಗ್ಯವಾಗಿಯೇ ಇರುವಿರಿ. ನನಗೆ ಆ ನಂಬುಗೆ ಇದೆ. ತಂಗಿಗೆ ಒಳ್ಳೆಯ ಸಂಬಂಧ ನೋಡಿ ಮೊದಲು ಮದುವೆ ಮುಗಿಸಿಬಿಡಬೇಕು. ಆಮೇಲೆ ಬೇಕಾದರೆ ಆಸ್ತಿ ಹಂಚಿಕೆಯ ವಿಷಯ ನೋಡಿದರೆ ಚೆನ್ನಾಗಿರುತ್ತದೆ" ಎಂದನು ಶ್ಯಾಮಳ.

ಆನಂದ ನಾರಾಯಣರಿಗೆ ಅವನ ಮಾತುಗಳಿಂದ ಆನಂದವಾಗತೊಡಗಿತು.

"ಹಾಗೆಯೇ ಮಾಡಬಹುದಾದರೂ, ಆಸ್ತಿ ಹಂಚಿಕೊಡುವುದರಿಂದ ಅವಳ ಮದುವೆಗೆ ಏನು ತಡೆ ಬರುತ್ತದೆ? ಸುವರ್ಣಳಿಗೂ ಒಂದು ಭಾಗ ಕೊಡುತ್ತೇವಲ್ಲ? ಅವಳ ಮದುವೆಗೆ ಅದರಿಂದಲೇ ಖರ್ಚು ಕೂಡಾ ಮಾಡಬಹುದು. ಏನನ್ನುವಿ?" ಎಂದು ಜಮೀನ್ದಾರರು ಪ್ರಶ್ನಿಸಿದರು.



"ಹಾಗೇಕೆ ಅಪ್ಪಾ? ಮನೆ ಹುಡುಗಿಯ ಮದುವೆಯ ಬಾಧ್ಯತೆ ಎಲ್ಲರಿಗೂ ಉಂಟಲ್ಲವೆ? ಅದೂ ಅಲ್ಲದೆ ಆಸ್ತಿ ಹಂಚಿಕೊಟ್ಟು ಬಿಟ್ಟರೆ, ನಿಮ್ಮ ಸಂಗತಿ ಏನು? ತೀರಾ ಹಂಚಿಕೊಟ್ಟ ಮೇಲೆ ನಿಮ್ಮ ಸಂಗತಿಯನ್ನು ಯಾರೂ ಹಚ್ಚಿಕೊಳ್ಳದೆ ಹೋಗಲೂ ಬಹುದು. ತಂಗಿಗೆ ಆಸ್ತಿ ಇಟ್ಟ ಮಾತ್ರಕ್ಕೆ ಅದು ಮದುವೆ ಮಾಡಿಬಿಡುತ್ತದೇನು? ಆದುದರಿಂದ ನೀವು ಪ್ರಸ್ತುತಕ್ಕೆ ಆಸ್ತಿ ಹಂಚುವ ಗೊಡವೆ ಹಚ್ಚಿಕೊಳ್ಳದೆ ನಿಶ್ಚಿಂತೆಯಾಗಿರಿ. ಮೊದಲು ತಂಗಿಯ ಮದುವೆಯಾಗಲಿ. ಆಮೇಲೆ ಮುಂದಿನ ಮಾತು" ಎಂದನು ಶ್ಯಾಮಳ.

ಆನಂದ ನಾರಾಯಣರು ಸ್ವಲ್ಪ ಹೊತ್ತು ಆಲೋಚಿಸುತ್ತ ಸುಮ್ಮನಿದ್ದು. "ಸುವರ್ಣಳಿಗೆ ಸಂಬಂಧ ಹುಡುಕುವುದು ಅಷ್ಟು ಸುಲಭವಾದ ಕೆಲಸವಲ್ಲ. ಬೇಗ ನಡೆಯುವಂಥಾದ್ದೂ ಅಲ್ಲ. ನಮ್ಮ ಅಂತಸ್ತಿಗೆ ತಕ್ಕ ಹಾಗೆ ಘನವಾದ ಮನೆತನವೇ ಆಗಬೇಕಪ್ಪಾ. ಇದೆಲ್ಲಾ ಕೂಡಿ ಬರುವವರೆಗೆ ನಾನು ಬದುಕಿರುವೆನೋ ಇಲ್ಲವೋ?" ಎಂದು ನಿಟ್ಟುಸಿರುಬಿಟ್ಟರು.

"ನಿಮ್ಮೊಡನೆ ಗಟ್ಟಿಯಾದ ಮೇಲೆ ಹೇಳೋಣವೆಂತಲೇ ಇದ್ದೆ. ತಂಗಿಯ ಮದುವೆ ನಾನೊಂದು ಕಡೆ ನೋಡಿದ್ದೇನೆ. ಜಳಕೂರಿನ ಜಮೀನ್ದಾರೀ ವಂಶಕ್ಕೆ ಸೇರಿದ, ನನ್ನ ಸ್ನೇಹಿತನೊಬ್ಬನಿದ್ದಾನೆ. ಅವನು ನಮ್ಮ ಸುವರ್ಣಳನ್ನು ಕುರಿತು ಆಸಕ್ತಿ ತೋರಿಸಿದ್ದಾನೆ. ಅವನದೊಂದು ಚಿತ್ರಪಟವೂ ನನ್ನ ಹತ್ತಿರವಿದೆ, ಅವನೇ ಕೊಟ್ಟದ್ದು, ನಿಮಗೆಲ್ಲಾ ತೋರಿಸಬೇಕೆಂದು. ನಮಗೆಲ್ಲರಿಗೂ ಹಿಡಿಸಿದ ಮೇಲೆ, ಅವನ ಹಿರಿಯರೊಂದಿಗೆ ಮಾತಾಡಬಹುದು. ಇದು ಎಲ್ಲಾ ವಿಧದಲ್ಲಿಯೂ ನಮಗೆ ಸರಿಯಾಗುವ ಸಂಬಂಧವೆಂದು ನನ್ನ ಅಭಿಪ್ರಾಯ" ಎಂದನು ಶ್ಯಾಮಳ.

ಆನಂದ ನಾರಾಯಣರು ಮಗನನ್ನು ಅಪ್ಯಾಯತೆಯಿಂದ ಆಲಿಂಗನ ಮಾಡಿಕೊಂಡು. "ನೀನು ನನ್ನ ನಿಜವಾದ ಮಗನೆನಿಸಿಕೊಂಡೆಯಪ್ಪಾ. ನಿನ್ನ ಅಣ್ಣಂದಿರು ಆಸ್ತಿಯನ್ನು ಎಷ್ಟು ಭಾಗ ಮಾಡಬೇಕೆಂದು ಲೆಕ್ಕಹಾಕುವುದರಲ್ಲಿರುವರೇ ಹೊರತು, ಒಬ್ಬರೂ ತಂಗಿಯ ಮದುವೆಯನ್ನು ಕುರಿತು ನಂಬುಗೆಯಾಗುವಂತೆ ಬಾಧ್ಯತೆ ವಹಿಸಿ ಹೇಳಲಿಲ್ಲ. ಕಡೆಗೆ ನನ್ನ ಶೇಷ ಜೀವಿತವನ್ನು ಕುರಿತು ಆಲೋಚನೆ ಮಾಡಿದವರೂ ಅಲ್ಲ, ನೀನು ಹೇಳಿದ ಸಂಬಂಧವು ಎಲ್ಲಾ ವಿಧದಲ್ಲಿಯೂ ಚೆನ್ನಾಗಿರುವ ಹಾಗೆ ಕಾಣುತ್ತದೆ, ಅವನ ಚಿತ್ರಪಟವನ್ನು ತೋರಿಸು. ನಾಳೆಯೇ ಅಲ್ಲಿಗೆ ಹೋಗಿ ಅವನ ಹಿರಿಯರೊಂದಿಗೆ ಮಾತಾಡೋಣ" ಎಂದರು.






# ಅನರ್ಹಶಿಷ್ಯ

ಅದೇನು ಹೊಸ ಕಥೆ ಹೇಳಿದರೂ ಸರಿಯೆ, ಬಿಡಲಾರೆನೆಂಬ ದೃಢ ನಿಶ್ಚಯದಿಂದ ರಾಜಾ ತ್ರಿವಿಕ್ರಮನು ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಭುಜಸ್ಕಂಧದ ಮೇಲೆ ಹಾಕಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ಹೋಗತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ಯಾವುದೋ ಒಂದು ಮಹತ್ಕಾರ್ಯವನ್ನು ಯಾರಿಗಾಗಿಯೋ ಸಾಧಿಸಿ ಕೊಡಲಿಕ್ಕಾಗಿ ಈ ರಾತ್ರಿಯ ಹೊತ್ತಿನಲ್ಲಿ, - ಭಯಾನಕವಾದ ಸ್ಮಶಾನದ ಕಡೆಗೆ ನಡೆಯಬೇಕಾದರೆ, ನಿನ್ನನ್ನು ಈ ಕಾರ್ಯಕ್ಕೆ ಪ್ರೋತ್ಸಾಹಿಸಿದವನು ಬಹುಶಃ ದೊಡ್ಡ ಮಂತ್ರವಾದಿಯಾಗಿರಬೇಕೆಂದು ನನಗೆ ಅನುಮಾನವಾಗಿದೆ. ಅಂತಹ ಮಂತ್ರವಾದಿಗಳ ಮಾತನ್ನು ನಂಬುವುದು ಒಂದೊಂದು ಸಾರಿ ಅಪಾಯಕ್ಕೂ, ನಿರಾಶೆಗೂ ಕಾರಣವಾಗುತ್ತದೆ. ಇದಕ್ಕೆ ಉದಾಹರಣೆಯಾಗಿ, ನಿನಗೆ ದಾರಿ ನಡೆಯುವ ಕಷ್ಟ ಗೊತ್ತಾಗದ ಹಾಗೆ ಸುವಾಕನೆಂಬವನ ಕಥೆ ಹೇಳುತ್ತೇನೆ, ಕೇಳು " ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು

ಬೇತಾಳಕಥೆಗಳು?...



ವಿಂಧ್ಯಾರಣ್ಯ ಪ್ರಾಂತದಲ್ಲಿ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತನಾಗಿದ್ದ ಒಬ್ಬ ದೊಡ್ಡ ಯೋಗಿ ಇದ್ದನು. ಆತನ ಬಳಿಗೆ ಅನೇಕ ಮಂದಿ ಶಿಷ್ಯರು ಬಂದು ವಿದ್ಯಾಭ್ಯಾಸ ಮಾಡಿ, ಜಾಣರಾಗಿ ಹೊರಟು ಹೋಗುತ್ತಿದ್ದರು. ಹಾಗೆ ಕಲಿಯಲು ಬಂದವರಲ್ಲಿ ಸುವಾಕನೆಂಬವನು ಮಂತ್ರಶಾಸ್ತ್ರದಲ್ಲಿ ತುಂಬಾ ಆಸಕ್ತಿಯುಳ್ಳವನಾಗಿದ್ದನು. ಅದನ್ನು ತಿಳಿದು ಯೋಗಿ ಅವನಿಗೆ ಮಂತ್ರಶಾಸ್ತ್ರದಲ್ಲಿ ಪ್ರಾಥಮಿಕ ಸೂತ್ರಗಳನ್ನು ಸ್ವಲ್ಪ ಸ್ವಲ್ಪ ಕಲಿಸಿ ಕೊಟ್ಟು, ಅಲ್ಲಿಗೇ ಸುಮ್ಮನಾಗಿಬಿಟ್ಟನು.

ಮಾಯಾಮಂತ್ರ ವಿದ್ಯೆಗಳ ಪ್ರಾರಂಭ ಮಾತ್ರ ಅರಿತುಕೊಂಡ ಸುವಾಕನು ಸ್ವಲ್ಪ ದಿನ ಕಾದು ನೋಡಿದ ಮೇಲೆ, ಒಂದು ದಿನ ಯೋಗಿಯೊಂದಿಗೆ, "ಸ್ವಾಮಿ, ಮಂತ್ರಶಾಸ್ತ್ರದಲ್ಲಿ ನನ್ನನ್ನು ಅಷ್ಟಕ್ಕೇ ಬಿಡಬಾರದು. ಪೂರ್ತಿಯಾಗಿ ಕಲಿಸಿ ನನ್ನನ್ನು ನಿಮ್ಮಂಥವನನ್ನಾಗಿ ಮಾಡಬೇಕು! ದಯೆ ತೋರಿಸಿರಿ" ಎಂದು ಕಾಲು ಹಿಡಿದು ಬೇಡಿದನು. ಅದಕ್ಕೆ ಯೋಗಿ, "ಮಂತ್ರಶಾಸ್ತ್ರ ಕಲಿಯಲಿಕೆ ಎಲ್ಲರಿಗೂ ತಕ್ಕ ಅರ್ಹತೆ ಬರುವುದಿಲ್ಲ. ಅದನ್ನೆಲ್ಲ ನೀನು ಪರರ ಕ್ಷೇಮಾಭಿವೃದ್ಧಿ ಕಾರ್ಯಗಳಿಗೆ ಹೊರತು ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವವನಲ್ಲವೆಂದು ನನಗೆ ನಂಬುಗೆಯಾಗಬೇಕು. ಹಾಗಾಗುವವರೆಗೂ ನಿನಗೆ ಅದನ್ನು ಉಪದೇಶಿಸಲು ಸಾಧ್ಯವಿಲ್ಲವಪ್ಪಾ" ಎಂದನು.

ಸುವಾಕನು ಯೋಗಿಯ ಬಳಿಯಲ್ಲಿ ಮತ್ತೆ ಸ್ವಲ್ಪ ಕಾಲ ಜಾಗರೂಕತೆಯಿಂದಿದ್ದು, ಗುರುವಿನ ಸೇವಾ ಶುಶ್ರೂಷೆಗಳನ್ನು ಮಾಡಿದನು. ಸುಮ್ಮನೆ ದಿನಗಳು ಉರುಳುತ್ತಿದ್ದುವೇ ಹೊರತು, ಯೋಗಿ ಅವನಿಗೆ ಮಂತ್ರಶಾಸ್ತ್ರಗಳ ಉಪದೇಶ ಮಾಡಲಿಲ್ಲ.

ಕಡೆಗೊಂದು ದಿನ ಸುವಾಕನು ಯೋಗಿಯೊಂದಿಗೆ, "ನಿಮಗೆ ನನ್ನ ಮೇಲೆ ಎಂದಿಗೆ ನಂಬುಗೆಯುಂಟಾಗುತ್ತದೆ ಸ್ವಾಮಿ?" ಎಂದು ದೀನಭಾವದಿಂದ ಕೇಳಿದನು.

ಯೋಗಿ ಎರಡು ಕ್ಷಣ ಆಲೋಚಿಸಿ, "ನೋಡಪ್ಪಾ, ಉಜ್ವಲ ದೇಶದ ರಾಜಕುಮಾರಿ ವಿದ್ಯುಲ್ಲತೆಯನ್ನು ಯಾವನು ವಿವಾಹ ಮಾಡಿಕೊಳ್ಳುವನೋ ಅವನೊಬ್ಬನೇ ಪೂರ್ತಿ ಮಂತ್ರಶಾಸ್ತ್ರ ಕಲಿಯಲು ಅರ್ಹನು" ಎಂದನು.

"ಹಾಗೇನು?" ಎಂದು ಸುವಾಕನು ಯೋಗಿಯಿಂದ ಅಪ್ಪಣೆ ಪಡೆದು ಸೀದಾ ಉಜ್ವಲ ದೇಶಕ್ಕೆ ಹೋದನು.

ಅಲ್ಲಿಯ ರಾಜಧಾನೀ ನಗರದಲ್ಲಿ ಸುವಾಕನು ತನಗೆ ಬಂದ ಮಂತ್ರ ವಿದ್ಯೆಗಳಿಂದ ಅನೇಕ ಅದ್ಭುತಗಳನ್ನು ಪ್ರದರ್ಶಿಸುತ್ತ, ಪೌರರನ್ನು ಬಹಳವಾಗಿ ಆಕರ್ಷಣೆ ಮಾಡಿದನು. ಯಾರ ಬಾಯಿಯಲ್ಲಿ ನೋಡಿದರೂ ಅವನು ಪ್ರದರ್ಶಿಸುವ ಇಂದ್ರಜಾಲದ ವಿನೋದ ವಿಷಯಗಳೇ. ಈ ವಾರ್ತೆ ರಾಜನ

ವರೆಗೂ ಹೋಯಿತು. ರಾಜನು ಕುತೂಹಲಗೊಂಡು ಅವನಿಗೆ, "ನೀನು ಬಹು ಚೆನ್ನಾಗಿ ಇಂದ್ರಜಾಲ ವಿದ್ಯೆಗಳನ್ನು ತೋರಿಸುವುದಾಗಿ ಕೇಳಿದೆವು. ನಮ್ಮ ಅಂತಃಪುರಕ್ಕೆ ಬಂದು ನಿನ್ನ ಪ್ರದರ್ಶನವನ್ನು ಕೊಟ್ಟು ನಮ್ಮನ್ನು ಸಂತೋಷಪಡಿಸಬೇಕೆಂದು ಕೋರುತ್ತೇವೆ" ಎಂದು ಕರೆ ಕಳುಹಿಸಿದನು.

ಅದರಂತೆ ಸುವಾಕನು ಅರಮನೆಗೆ ಹೋಗಿ ರಾಜನೊಂದಿಗೆ, "ಪ್ರಭೂ, ತಮ್ಮ ಕೋರಿಕೆಯನ್ನು ಅಲ್ಲಗಳೆಯಲಾರೆ. ಆದರೆ ತಾವು ಅಂದುಕೊಳ್ಳುವ ಹಾಗೆ ನಾನು ಇಂದ್ರಜಾಲಿಕನೇನಲ್ಲ. ವಿಂಧ್ಯಾರಣ್ಯ ಪ್ರಾಂತದಲ್ಲಿರುವ ಒಬ್ಬರು ಮಹಾ ಯೋಗಿಗಳ ಶಿಷ್ಯ, ನಿಮ್ಮ ಕುಮಾರಿ ವಿದ್ಯುಲ್ಲತೆ ಕಾರಣ ಜನ್ಮದವಳಾಗಿದ್ದಾಳೆ. ಆ ಯೋಗಿಯ ಆದೇಶದ ಮೇಲೆ ನಿಮ್ಮ ಕುಮಾರಿಯೊಂದಿಗೆ ಒಂದು ಮಾತು ಹೇಳಿ ಹೋಗಬೇಕಾಗಿದೆ. ಪ್ರದರ್ಶನ ಮುಗಿದ ಮೇಲೆ ಆಕೆಯ ದರ್ಶನವಾದರೆ ಸಾಕು" ಎಂದನು.

ರಾಜನು ಅದಕ್ಕೆ ಅಂಗೀಕರಿಸಿದನು. ಅಂತಃಪುರದಲ್ಲಿ ಸುವಾಕನ ಪ್ರದರ್ಶನಗಳಿಗೆ ಏರ್ಪಾಟು ನಡೆಯಿತು. ಎಲ್ಲರೂ ಅವನು ಮಾಡಿ ತೋರಿಸಿದ ಪ್ರದರ್ಶನಗಳಿಂದ ಆಶ್ಚರ್ಯ ಮುಗ್ಧರಾದರು.

ಪ್ರದರ್ಶನವೆಲ್ಲಾ ಮುಗಿದ ಮೇಲೆ ವಿದ್ಯುಲ್ಲತೆ ಸುವಾಕನನ್ನು ಅಭಿನಂದಿಸಲು ಬಂದಳು. ಅವಳನ್ನು ನೋಡಿ ಸುವಾಕನು "ನನ್ನ ಪ್ರದರ್ಶನ ಹೇಗಿತ್ತು ?" ಎಂದು ಕೇಳಿದನು.

"ನನ್ನ ಜೀವಿತದಲ್ಲಿ ಇಷ್ಟರವರೆಗೆ ಇಂತಹ ವಿದ್ಯಾ ಪ್ರದರ್ಶನ ನೋಡಿಯೇ ಇರಲಿಲ್ಲ !" ಎಂದಳು ವಿದ್ಯುಲ್ಲತೆ.

"ನೀವು ನೋಡಿದುದು ಮಂತ್ರಶಾಸ್ತ್ರದಲ್ಲಿ ಸಾವಿರದಲ್ಲೊಂದು ಭಾಗ ಮಾತ್ರವೇ !" ಎಂದನು ಸುವಾಕ.

"ಹಾಗಾದರೆ ನಿಮಗಿರುವ ಎಲ್ಲಾ ಶಕ್ತಿಯನ್ನೂ ಪ್ರದರ್ಶನ ಮಾಡಿ, ನಮ್ಮನ್ನು ಇನ್ನಿಷ್ಟು ಆನಂದಪಡಿಸಿರೇನು ? ಅದಕ್ಕೆ ಏನೇನಾಗಬೇಕೋ ಹೇಳಿರಿ" ಎಂದಳು ವಿದ್ಯುಲ್ಲತೆ.





"ನನಗೆ ಇರುವ ಶಕ್ತಿ ಸದ್ಯಕ್ಕೆ ಇಷ್ಟೇ. ಇನ್ನೂ ಉಳಿದಿರುವ ಆ ಶಕ್ತಿಗಳನ್ನೆಲ್ಲ ನಾನು ಸಂಪಾದಿಸಬೇಕಾದರೆ ನನಗೆ ನಿಮ್ಮ ಸಹಾಯವೇ ಬೇಕಾಗಿದೆ" ಎಂದನು ಸುವಾಕ.

"ಹೇಳಿರಲ್ಲ! ನನ್ನ ಕೈಲಾದಷ್ಟೂ ಸಹಾಯ ಮಾಡುತ್ತೇನೆ" ಎಂದಳು ವಿದ್ಯುಲ್ಲತೆ.

ಸುವಾಕನು ಒಂದೆರಡು ಕ್ಷಣ ಹಿಂದೆ ಮುಂದೆ ನೋಡಿ, "ನೀವು ನನ್ನನ್ನು ಮದುವೆ ಮಾಡಿಕೊಳ್ಳಬೇಕು. ಆಗ ನಾನು ಈ ಪ್ರಪಂಚದಲ್ಲಿ ಇದಿರಿಲ್ಲದಂತಹ ಬಹು ದೊಡ್ಡ ಮಂತ್ರವೇತ್ತನಾಗುತ್ತೇನೆ. ಅನಂತರ ನಾವಿಬ್ಬರೂ ಪ್ರಪಂಚವನ್ನೇ ಆಳಿಕೊಂಡಿರಬಹುದು" ಎಂದನು.

ವಿದ್ಯುಲ್ಲತೆ ವಿಚಾರಮುಖಭಾವದಿಂದ, "ಅಯ್ಯೋ, ಆ ರೀತಿಯಾಗಿ ನಿಮಗೆ ಸಹಾಯ ಮಾಡದ ದುರದೃಷ್ಟದವಳಾಗಿದ್ದೇನೆ. ನನ್ನ ವಿವಾಹವು ವಿಜಯಪುರಿಯ ರಾಜ ವೀರಸೇನರೊಂದಿಗೆ ನಿಶ್ಚಯವಾಗಿ ಹೋದ ಮಾತು. ಅವರು ನಾಳೆಯೇ ಇಲ್ಲಿಗೆ ಬರಲಿದ್ದಾರೆ ಕೂಡಾ" ಎಂದಳು.

ಆ ಮಾತು ಕೇಳಿ ಸುವಾಕನು ಚಿಂತೆಯಿಂದ ಇಳಿದುಹೋದನು. ತರುವಾಯ ಏನೋ ಆಲೋಚನೆ ಮಾಡಿ ವಿದ್ಯುಲ್ಲತೆಯೊಂದಿಗೆ, "ವೀರಸೇನರನ್ನು ವಿವಾಹ ಮಾಡಿಕೊಂಡರೆ ನೀವು ವಿಜಯಪುರಿಗೆ ಮಾತ್ರವೇ ರಾಣಿಯಾಗುವಿರಿ, ನನ್ನನ್ನು ವಿವಾಹ ಮಾಡಿಕೊಂಡರೆ ಈ ಪ್ರಪಂಚಕ್ಕೇ ರಾಣಿಯಾಗಬಹುದು. ನೀವು ಮನಸ್ಸು ಮಾಡಿದರೆ ಇದು ನಡೆಯುತ್ತದೆ" ಎಂದನು.

"ಏನು ಮಾಡಲಿ? ನನ್ನ ಮನಸ್ಸನ್ನು ಬದಲಾಯಿಸಿಕೊಳ್ಳಲು ನನ್ನಿಂದಾಗದು. ಪ್ರಪಂಚಕ್ಕೆ ರಾಣಿಯಾಗುವ ಅದೃಷ್ಟ ನನಗಿಲ್ಲ" ಎಂದಳು ವಿದ್ಯುಲ್ಲತೆ.

"ರಾಜಕುಮಾರೀ! ಚೆನ್ನಾಗಿ ಯೋಚಿಸಿ ನೋಡು. ನಿನ್ನಿಂದಾಗಿ ನನಗೆ ಮಹಾ ಚಕ್ರವರ್ತಿಯಾಗುವ ಯೋಗ ತಪ್ಪಿಹೋಗುತ್ತಾ ಇದೆ. ಇದಕ್ಕೆ ತಕ್ಕ ಫಲಿತ ನೀನು ಅನುಭವಿಸಬೇಕಾದೀತು. ಇರಲಿ, ವೀರಸೇನನು ಬರುವವರೆಗೂ ನಾನು ಕಾದಿರುತ್ತೇನೆ" ಎಂದನು ಸುವಾಕ.

ಮರುದಿನ ವೀರಸೇನನು ನಗರಕ್ಕೆ ಬಂದನು. ಸುವಾಕನು ಅವನನ್ನು ಸಂಧಿಸಿ ತನ್ನ ಸಮಾಚಾರವನ್ನೆಲ್ಲಾ ಅವನೊಂದಿಗೆ ಹೇಳಿ, ರಾಜಕುಮಾರಿಯನ್ನು ತನಗೆ ಬಿಟ್ಟುಕೊಡಬೇಕೆಂದನು.

ಅದನ್ನೆಲ್ಲ ಕೇಳಿ ವೀರಸೇನನು ಶಾಂತತೆಯಿಂದ, "ಈ ವಿದ್ಯುಲ್ಲತೆಯೂ ನಾನೂ ಪರಸ್ಪರ ಪ್ರೇಮದಿಂದ ಬಂಧಿತರಾಗಿದ್ದೇವೆ. ಅದನ್ನು ಬಿಡಿಸಲು ಸಾಧ್ಯವಿಲ್ಲ. ಅವಳ ಹೊರತು ಬೇರೆ ಏನು ಕೇಳಿದರೂ ಕೊಡಲು ಸಿದ್ಧನಿದ್ದೇನೆ" ಎಂದನು.

ಆ ಮಾತು ಕೇಳಿದ ಕೂಡಲೇ ಸುವಾಕನು ಕೋಪದಿಂದ ಕುರುಡನಂತಾಗಿ, ಹಲ್ಲು ಕಡಿದು,



"ಹಾಗಾದರೆ ನೀನು ಕುರೂಪಿಯಾಗು!" ಎಂದನು. ಅವನ ಮಂತ್ರ ಪ್ರಭಾವದಿಂದ ವೀರಸೇನನು ಕುರೂಪಿಯಾಗಿ ಮಾರ್ಪಟ್ಟನು.

"ಈಗ ನಿನ್ನನ್ನು ವಿದ್ಯುಲ್ಲತೆ ಹೇಗೆ ವಿವಾಹ ಮಾಡಿಕೊಳ್ಳುವಳೋ ನೋಡುತ್ತೇನೆ" ಎಂದು ಸುವಾಕನು ವಿಕಟವಾಗಿ ನಕ್ಕನು.

ವೀರಸೇನನು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿದನು. ತನ್ನ ಕುರೂಪವು ಅವನಿಗೇ ಅಸಹ್ಯವೆನಿಸಿತು. ಈಗ ವಿದ್ಯುಲ್ಲತೆಯ ಬಳಿಗೆ ಹೇಗೆ ಹೋಗುವುದೆಂದು ಅವನು ಖಿನ್ನನಾಗಿರುವಾಗ, ನಡೆದ ಸಂಗತಿಯನ್ನೆಲ್ಲಾ ವಿದ್ಯುಲ್ಲತೆ ತಿಳಿದು, ತನ್ನ ಸೇವಕಿಯ ದ್ವಾರಾ, ಅವನನ್ನು ತನ್ನ ಬಳಿಗೆ ಕರೆಯಿಸಿದಳು.

"ನಾನು ನಿಮ್ಮ ರೂಪವನ್ನು ಪ್ರೇಮಿಸಲಿಲ್ಲ, ಮನಸ್ಸನ್ನು ಪ್ರೇಮಿಸಿದವಳು. ನಿಮ್ಮ ಹೊರತು ಬೇರೆ ಯಾರನ್ನೂ ವಿವಾಹ ಮಾಡಿಕೊಳ್ಳಲಾರೆನು" ಎಂದಳು ವೀರಸೇನನೊಂದಿಗೆ ವಿದ್ಯುಲ್ಲತೆ.

ಇದನ್ನು ಕೇಳಿ ವೀರಸೇನನು ಸುವಾಕನನ್ನು ನೋಡಿ, "ನೀನು ನಮ್ಮ ಪ್ರೇಮವು ಎಷ್ಟೊಂದು ಬಲವಾದುದೆಂದು ತಿಳಿಯಲಿಲ್ಲ. ನಾನು ಕುರೂಪಿಯಾದರೂ ವಿದ್ಯುಲ್ಲತೆ ನನ್ನನ್ನೇ ಮದುವೆಯಾಗುವ ಹಟದಲ್ಲಿದ್ದಾಳೆ" ಎಂದನು.

ಸುವಾಕನು ಕೋಪದಿಂದ, "ಅವಳ ಪ್ರೇಮ ದೊಡ್ಡದೇಬುದು ನಿಜ. ಆದರೆ ನಿನ್ನ ಸಂಗತಿ ಏನು? ಈ ಕುರೂಪಿ ಮುಖದೊಂದಿಗೆ ನೀನಿನ್ನೂ ಅವಳಿಗೆ ತಕ್ಕ ಗಂಡನೆಂದು ಭಾವಿಸುವೆಯಾ? ಅವಳ ಮೇಲೆ ನಿನಗೆ ನಿಜವಾದ ಪ್ರೇಮವಿದ್ದರೆ ಅವಳನ್ನು ಮರೆತುಬಿಡು. ನನ್ನನ್ನು ಮದುವೆಯಾದರೆ ಅವಳು ಈ ಪ್ರಪಂಚಕ್ಕೇ ರಾಣಿಯಾಗುತ್ತಾಳೆ" ಎಂದನು.

ಆ ಮಾತಿಗೆ ವೀರಸೇನನು ನಕ್ಕು "ವಿದ್ಯುಲ್ಲತೆಗೆ ನಾನು ತಕ್ಕ ವರನಲ್ಲದೆ ಹೋದರೆ, ಅದನ್ನು ಅವಳು ಹೇಳಬೇಕೇ ಹೊರತು ನೀನೇಕೆ ಹಾಗೆ ಅಂದುಕೊಳ್ಳುವಿ? ನಮ್ಮ ವಿವಾಹವು ತಪ್ಪದೆ ನಡೆದು ತೀರುತ್ತದೆ" ಎಂದನು.

ಅಂತೂ ಸುವಾಕನಿಂದ ಅವರ ಮದುವೆಯನ್ನು ನಿಲ್ಲಿಸಲು ಸಾಧ್ಯವಾಗಲಿಲ್ಲ. ಅದು ಯಥಾಸಾಂಗವಾಗಿ ನಡೆಯಿತು. ವಿವಾಹವಾದ ಮರುಕ್ಷಣದಲ್ಲೇ ವೀರಸೇನನಿಗೆ ಮೊದಲಿನ ರೂಪ ಬಂದುಬಿಟ್ಟಿತು.

ಸುವಾಕನು ಸೋತುಹೋದ ದಿಗಿಲಿನಿಂದ ಯೋಗಿಯ ಬಳಿಗೆ ಹಿಂದಿರುಗಿ, "ಸ್ವಾಮಿ, ನನ್ನ ಪ್ರಯತ್ನವು ಸಫಲವಾಗಲಿಲ್ಲ, ವೀರಸೇನನ ಸ್ವಾರ್ಥದಿಂದಲೇ ಹೀಗಾಯಿತು" ಎಂದು ನಡೆದ ಸಮಾಚಾರವನ್ನೆಲ್ಲಾ ಹೇಳಿದನು.

ಯೋಗಿ ಸುವಾಕನ ಮುಖವನ್ನು ಪರೀಕ್ಷಿಸಿ ನೋಡಿ, "ಅವನ ಸ್ವಾರ್ಥವು ಇದರಲ್ಲೇನೂ ಇಲ್ಲ. ನೀನು ಸರಿಯಾದ ಮಂತ್ರಶಾಸ್ತ್ರ ಕಲಿಯಲು ಅರ್ಹ

ನಲ್ಲ. ಆದುದರಿಂದ ನೀನು ನಿನ್ನ ಪಾಡಿಗೆ ಹೊರಟು ಹೋಗಬಹುದು" ಎಂದನು.

ಹೀಗೆ ಬೇತಾಳವು ಕಥೆಯನ್ನು ಮುಗಿಸಿ, "ರಾಜಾ, ಮಂತ್ರವೇತ್ತನಾದ ಯೋಗಿಯ ಪ್ರವರ್ತನೆ ಅನ್ಯಾಯವಾಗಿ ಕಾಣುತ್ತದೆ. ತನ್ನ ಶಿಷ್ಯನಾದ ಸುವಾಕನಿಗೆ ಮಂತ್ರಶಾಸ್ತ್ರದ ಒಂದು ಭಾಗವನ್ನು ಕಲಿಸಿ, ವಿದ್ಯುಲ್ಲತೆಯ ಸಂಗತಿಯನ್ನು ಅವನೇ ಹೇಳಿ, ಕಡೆಗೆ ಅವನು ಸೋತು ಹಿಂದಿರುಗಿ ಬಂದ ಮೇಲೆ, ಅವನು ಮಂತ್ರಶಾಸ್ತ್ರ ಕಲಿಯಲು ಅರ್ಹನಲ್ಲವೆಂದರೆ ಅದು ಯಾವ ನ್ಯಾಯ? ಯಾವ ಧರ್ಮ? ತಾನು ಕುರೂಪಿಯಾಗಿದ್ದೂ ರಾಜಕುಮಾರಿಯನ್ನು ವಿವಾಹ ಮಾಡಿಕೊಳ್ಳುವೆನೆಂದು ಹಟ ತೋರಿಸಿದ ವೀರಸೇನನೇ ನಿಜವಾದ ಸ್ವಾರ್ಥಿಯಲ್ಲವೆ? ಅವನನ್ನೇ ಮದುವೆಯಾಗುವೆನೆಂದ ರಾಜಕುಮಾರಿ ಕೂಡಾ ಮಹಾ ಸ್ವಾರ್ಥಿಯಲ್ಲವೆ? ಯೋಗಿಯ ಮಾತಿನಿಂದ ಅವರೇ ಮಂತ್ರಶಾಸ್ತ್ರ ಕಲಿಯಲು ಅರ್ಹರೆಂದ ಹಾಗೆ ಆಯಿತೋ ಇಲ್ಲವೋ? ಇದಕ್ಕೆ ತಕ್ಕ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಿಡಿದು ಹಾರುತ್ತದೆ" ಎಂದು ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಯೋಗಿಯ ಪ್ರವರ್ತನೆಯಲ್ಲಿ ಅನ್ಯಾಯವೋ ಅಧರ್ಮವೋ ಯಾವುದೂ ಇಲ್ಲ. ಮಂತ್ರಶಾಸ್ತ್ರದ ಮೇಲೆ ಹೆಚ್ಚು ಆಸಕ್ತಿ ಇರುವ ಸುವಾಕನಿಗೆ, ಯೋಗಿ ಮೊದಲು ಸ್ವಲ್ಪ ಉಪದೇಶಿಸಿ, ಅವನ ನೈತಿಕ ಮಟ್ಟದ ಅರ್ಹತೆಯನ್ನು ತಿಳಿಯಲು ರಾಜಕುಮಾರಿಯ ಸಂಗತಿಯನ್ನು ಹೇಳಿದ್ದಾನೆಯೇ ಹೊರತು ಬೇರೆ ಕಾರಣವೇನಿಲ್ಲ. ಸುವಾಕನು ಕಲಿತ ಸ್ವಲ್ಪ ವಿದ್ಯೆಯಿಂದಲೇ ಅವನು ಅದನ್ನು ಹೇಗೆ ಉಪಯೋಗಿಸುವನೆಂಬುದು ತಿಳಿದು ಹೋಯಿತು. ವಿದ್ಯುಲ್ಲತೆಯ ಹಾಗೂ ವೀರಸೇನನ ಸ್ವಾರ್ಥದ ಸಂಗತಿಯಲ್ಲಿ ಅಧರ್ಮವೇನಿಲ್ಲ. ಅವರಿಬ್ಬರು ಪ್ರೇಮಿಸಿಕೊಂಡವರು. ಅದು ಪ್ರಕೃತಿ ಧರ್ಮವೇ. ಸುವಾಕನೇ ಮಹಾ ಸ್ವಾರ್ಥಿಯಾದುದರಿಂದ ಕಲಿತ ಸ್ವಲ್ಪ ಮಂತ್ರವಿದ್ಯೆಯಿಂದ ವೀರಸೇನನನ್ನು ಕುರೂಪಿ ಮಾಡಿದನು. ಅಂಥವನು ಪೂರ್ತಿ ಮಂತ್ರ ಕಲಿತು ತೇರ್ಗಡೆ ಹೊಂದಿದ್ದರೆ ಅವನೇ ಹೇಳಿಕೊಂಡಂತೆ, ಪ್ರಪಂಚಕ್ಕೇ ಮುಪ್ಪು ತರುತ್ತಿದ್ದನು. ವಿದ್ಯುಲ್ಲತಾ ವೀರಸೇನರ ಪ್ರೇಮದಲ್ಲಿದ್ದ ಧರ್ಮಬಲದಿಂದಲೇ ವಿವಾಹವಾದ ಕೂಡಲೇ ವೀರಸೇನನಿಗೆ ಯಥಾರೂಪ ಬಂದಿದೆ. ಇದರಲ್ಲಿ ವೀರಸೇನ ವಿದ್ಯುಲ್ಲತೆಯರ ಸ್ವಾರ್ಥವೋ, ಯೋಗಿಯ ಅಧರ್ಮವೋ ಇಲ್ಲವೇ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾಗುತ್ತಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತು.





# ಬಾಯ್ದುರುಸುರೋಗ

**ಬಾ**ದಾಂಪಾಡಿ ಎಂಬ ಊರಿನಲ್ಲಿ ಚಿನ್ನಯ್ಯನೆಂಬ ಬಹು ದೊಡ್ಡ ಧನಿಕನಾದ ರೈತ ಗೃಹಸ್ಥನಿದ್ದನು. ಆತನ ಹತ್ತಿರ ಊರವರಿಗೂ ಪರ ಊರಿನವರಿಗೂ ಏನೋ ಒಂದು ಕೆಲಸ ಬೀಳುತ್ತಿತ್ತು. ಬಂದವರು ಕೆಲಸ ತೀರಿ ಹೊರಟುಹೋದ ಮೇಲೆ ಅವರನ್ನು ಕುರಿತು ಇನ್ನೊಬ್ಬರೊಂದಿಗೆ ಚಿನ್ನಯ್ಯನು "ಶುದ್ಧ ಕೈಲಾಗದ ಮನುಷ್ಯ" ಎನ್ನುತ್ತಿದ್ದನು. ಮನೆಯಲ್ಲಿರುವ ಎಲ್ಲರೂ ಆತನ ಬಾಯಿಯಿಂದ ಆ ಮಾತು ಯಾವಾಗಲೂ ಕೇಳುತ್ತಿದ್ದರು.

ಒಂದು ಸಾರಿ ಚಿನ್ನಯ್ಯನು ಒಂದು ಮುಖ್ಯ ಕೆಲಸದ ಮೇಲೆ ನೆರೆಯ ಗ್ರಾಮಕ್ಕೆ ಹೋಗಿ ಅಲ್ಲಿಂದ ಹಿಂದಿರುಗಲು ಬಹಳ ಹೊತ್ತಾಗಿ ಹೋಯಿತು. ಬರುವ ದಾರಿಯಲ್ಲಿ ಕತ್ತಲಾಗಿ ಬಿಟ್ಟುದರಿಂದ, ದಾರಿಯ ಪಕ್ಕದಲ್ಲಿದ್ದ ಒಂದು ಗ್ರಾಮಕ್ಕೆ ಹೋಗಿ, ಒಂದು ಛತ್ರದ ಕೋಣೆಯಲ್ಲಿ ತಂಗಿದನು.

ರಾತ್ರಿ ಎಷ್ಟು ಹೊತ್ತಾದರೂ ಅವನಿಗೆ ನಿದ್ದೆ ಹಿಡಿಯಲಿಲ್ಲ. ಹೊಸ ಸ್ಥಳವಾದುದರಿಂದ ಹೊರಳಾಡಿಕೊಂಡಿದ್ದನು. ಆಗ ಪಕ್ಕದ ಕೋಣೆಯಲ್ಲಿ ಅವನ ಹಾಗೆಯೇ ನಿದ್ದೆ ಬಾರದ ಯಾರೋ ಇಬ್ಬರು ತಮ್ಮೊಳಗೆ ಮಾತಾಡಿಕೊಳ್ಳಲು ತೊಡಗಿದರು: "ನೀವು ಕೂಡಾ ಬಾದಾಂಪಾಡಿಗೇ ಹೋಗುವಿರೆಂದರೆ ಅಲ್ಲಿಯವರೆಗೂ ನನಗೆ ನಿಮ್ಮ ಜತೆ ಇದೆಯೆಂದಾಯಿತು. ಅಲ್ಲಿ ಯಾರ ಮನೆಗೆ ಹೋಗುವಿರಿ? ಏಕೆಂದರೆ ನಾನೂ ಬಾದಾಂಪಾಡಿಯವನೇ" ಎಂದನು ಒಬ್ಬ.

"ಚಿನ್ನಯ್ಯನವರ ಮನೆಗೆ ಹೋಗಬೇಕಿತ್ತು!" ಎಂದಿತು ಎರಡನೇ ಕಂಠ.

"ಓಹೋ! ಕೈಲಾಗದ ಮನುಷ್ಯ ಚಿನ್ನಯ್ಯನ ಮನೆಗೋ?" ಎಂದು ಮೊದಲು ಹೇಳಿದವನು ನಕ್ಕ ಹಾಗೆ ಭಾಸವಾಯಿತು.

ಆದನ್ನು ಕೇಳಿ ಎರಡನೇ ಕಂಠಸ್ವರವು ತುಸು ಆಶ್ಚರ್ಯಪಟ್ಟ ಹಾಗೆ "ಹಾಗೆಂದರೇನ್ರೀ! ಆ ಊರಿನಲ್ಲಿ ಚಿನ್ನಯ್ಯನವರಷ್ಟು ದೊಡ್ಡ ಮರ್ಯಾದೆವಂತರೇ ಇಲ್ಲವೆನ್ನುತ್ತಾರೆ. ಅವರಿಗೆ ಮದುವೆಯ ವಯಸ್ಸಿನ ಮಗಳಿರುವ ಸಂಗತಿ ಕೇಳಿ, ನನ್ನ ಮಗನಿಗೆ ನೋಡೋಣವೆಂತಲೇ ಹೊರಟಿದ್ದೇನೆ. ಅವರ ಅಂತಸ್ತು ಮುಂತಾದ್ದು ನಮಗೆ ಸರಿಹೋದೀತು ಅಂತ ನಂಬಿ, ಆ ಊರಿನ ನಾಲ್ಕುಮಂದಿಯೊಂದಿಗೆ ಅವರನ್ನು ಕುರಿತು ವಿಚಾರಿಸಿ ಅಲ್ಲಿಗೆ ಹೋಗೋಣವೆಂದಿದ್ದೆ.

ಕ ಮ ಲಿ ನಿ

ಅವರನ್ನು ಕುರಿತು ನಿಮಗೆ ತಿಳಿದುದೆಲ್ಲಾ ಸ್ವಲ್ಪ ಹೇಳಿದರೆ, ನಾನು ಅಷ್ಟುದೂರ ಹೋಗಬೇಕಾದ ಅಗತ್ಯವಿಲ್ಲವಷ್ಟೆ?" ಎಂದು ನುಡಿಯಿತು.

ಅದನ್ನು ಕೇಳಿ ಮೊದಲು ಮಾತಾಡಿದವನು, "ಅಂಥಾದ್ದೇನಿಲ್ಲ, ಚಿನ್ನಯ್ಯ ದೊಡ್ಡ ಮನುಷ್ಯರೆಂಬುದಕ್ಕೆ ಸಂದೇಹವಿಲ್ಲ. ಒಳ್ಳೆಯ ಗುಣದವರೇ" ಎಂದನು.

"ಹಾಗಾದರೆ ಅವರನ್ನು ಕೈಲಾಗದ ಮನುಷ್ಯ ಅಂತ ಏನೋ ಹೇಳಿದಿರಲ್ಲ ?" ಎಂದು ಎರಡನೆಯವನು ಪ್ರಶ್ನೆ ಮಾಡಿದನು.

"ಅದು ಮತ್ತೇನಿಲ್ಲ. ನಮ್ಮೂರಿನಲ್ಲಿ ಚಟ್ಟೆಮೂಗು ಚಿನ್ನಯ್ಯ ಅಂತ ಇನ್ನೊಬ್ಬ ರೈತನೂ ಇದ್ದಾನೆ. ನಿಮ್ಮ ಈ ಚಿನ್ನಯ್ಯನವರು ಮಾತು ಮಾತಿಗೆ ಪ್ರತಿಯೊಬ್ಬರನ್ನೂ ಶುದ್ಧ ಕೈಲಾಗದ ಮನುಷ್ಯ ಅನ್ನುತ್ತಾ ಇರುತ್ತಾರೆ. ಆದುದರಿಂದ ಊರವರು ತಮ್ಮೊಳಗೆ ಹೇಳಿಕೊಳ್ಳುವಾಗ ಅವರಿಗೆ ಹಾಗೆ ಅಡ್ಡ ಹೆಸರು ಹಚ್ಚಿಬಿಟ್ಟರು, ಅಷ್ಟೇ. ನೀವು ಭೇಷಾಗಿ ಅವರ ಸಂಬಂಧ ಬೆಳೆಸಬಹುದು" ಎಂದನು ಬಾದಾಂಪಾಡಿಯವನು.

"ಓ! ಬಾಯ್ಬುರುಸು ರೋಗಾ ಅನ್ನಿ !" ಎಂದು ಎರಡನೆಯವನು ಜೋರಾಗಿ ನಕ್ಕನು.

ಈ ಸಂಭಾಷಣೆಗಳನ್ನು ಪೂರ್ತಿಯಾಗಿ ಕೇಳಿದ ಚಿನ್ನಯ್ಯನು ಎದ್ದು ಪಕ್ಕದ ಕೋಣೆಯೊಳಗೆ ಹೊಕ್ಕನು. ಅವನನ್ನು ನೋಡಿ ಬಾದಾಂಪಾಡಿಯವನಿಗೆ ಗಾಬರಿಯಾಯಿತು. ಆದರೆ ಚಿನ್ನಯ್ಯ ಅವನನ್ನು ನೋಡಿಯೂ ನೋಡದವನಂತೆ ಪಕ್ಕದಲ್ಲಿದ್ದವನೊಂದಿಗೆ, "ನಮಸ್ಕಾರ ಶಾಂತಯ್ಯನವರೇ ! ನಿಮ್ಮ ಮಾತುಗಳನ್ನೆಲ್ಲಾ ನಾನು ಕೇಳಿದೆ. ಮನುಷ್ಯನಿಗೆ ಹಣವೊಂದಿದ್ದ ಮಾತ್ರಕ್ಕೆ ಎಲ್ಲಾ ಸರಿಹೋಗಲಾರದು. ಯಾರನ್ನೂ ನೋಯಿಸದ ಹಾಗೆ ಮಾತಾಡಲು ತಿಳಿದರೇನೇ ನಾಲ್ಕು ಮಂದಿಯ ಮುಂದೆ ಗೌರವವಿರುತ್ತದೆಂಬುದನ್ನು ನಮ್ಮೂರಿನವನು ಸರಿಯಾದ ಹೊತ್ತಿನಲ್ಲಿ ತಿಳಿಸಿದ್ದಾನೆ, ಇಲ್ಲದಿದ್ದರೆ ನಿಮ್ಮಂಥವರೊಂದಿಗೆ ಬರಲಿರುವ ಸಂಬಂಧ ಕೈಜಾರಿ ಹೋಗುತ್ತಿತ್ತು" ಎಂದನು.

"ಅಕಸ್ಮಾತ್ತಾಗಿ ನಿಮ್ಮ ಬಾಯಿಯಿಂದ ಹೊರಡುವ ಮಾತುಗಳೇ ನಿಮ್ಮ ಒಳ್ಳೆಯತನವನ್ನೂ ಶಾಂತ ಸ್ವಭಾವವನ್ನೂ ತಿಳಿಯಪಡಿಸುತ್ತದೆ" ಎಂದನು ಎರಡನೆಯವನಾದ ಶಾಂತಯ್ಯ.

"ನೀವು ನನ್ನನ್ನು ಅರಿಯದಿದ್ದರೂ ನಿಮ್ಮನ್ನು ನಾನು ಬಲ್ಲೆ, ನೀವು ಒಪ್ಪಿದರೆ ಈ ವಿಷಯ ಮಾತಾಡಲು ನಮ್ಮ ಪುರೋಹಿತರನ್ನು ನಾನೇ ನಿಮ್ಮಲ್ಲಿಗೆ ಕಳುಹಿಸುತ್ತೇನೆ" ಎಂದನು ಚಿನ್ನಯ್ಯ.

ಇದಕ್ಕೆ ಶಾಂತಯ್ಯ ಸಂತೋಷದಿಂದ ಒಪ್ಪಿದನು. ಆಮೇಲೆ ಚಿನ್ನಯ್ಯನ ಬಾಯ್ಬುರುಸು ತನದ ಮಾತನ್ನು ಯಾರೂ ಕೇಳಲಿಲ್ಲ.






# ವಿದೂಷಕನ ಗಣಿತ ಜ್ಞಾನ

**ಕಾಂ**ಚನಗಿರಿ ದೇಶದ ಕನಕಾದಿತ್ಯ ರಾಜನಿಗೆ ಪ್ರಜೆಗಳ ಕ್ಷೇಮಚಿಂತನೆ ಹೆಚ್ಚಾಗಿತ್ತು. ಅಂತಲೇ ದೇಶಕ್ಕೆ ಕ್ಷೇಮವಾಗುವಂತಹ ಕೆಲವು ಪಥಕಗಳನ್ನು ಹಾಕಿಕೊಂಡು, ಅವುಗಳನ್ನು ರೂಪುಗೊಳಿಸಿ ಕಾರ್ಯರೂಪಕ್ಕೆ ಅಮಲುಪಡಿಸುವಂತಹ ಅಧಿಕಾರಿಗಳನ್ನು ಆರಿಸಿಕೊಳ್ಳಲು ಒಂದು ಪರೀಕ್ಷೆಯನ್ನು ಇಡಿಸಿದನು. ಆ ಪರೀಕ್ಷೆಯಲ್ಲಿ ನೀಲ, ವಿನೀಲ, ನಿರ್ಮಲ ಎಂಬವರು ದೊಡ್ಡ ಪ್ರತಿಭಾಶಾಲಿಗಳೆಂದು ತೇರ್ಗಡೆಯಾದರು. ಇವರಲ್ಲಿ ಯಾವ ಒಬ್ಬನೂ ಯಾವುದರಲ್ಲಿಯೂ ಇನ್ನೊಬ್ಬನಿಗಿಂತ ಕಡಿಮೆಯವನಲ್ಲವೆಂದು ಸ್ಪಷ್ಟವಾಯಿತು.

ಮಹಾರಾಜನು ಆ ಮೂವರನ್ನೂ ಯೋಜನೆಗಳನ್ನು ಕಾರ್ಯರೂಪಕ್ಕಿಳಿಸುವ ಅಭಿವೃದ್ಧಿ ಪಥಕಾಧಿಕಾರಿಗಳಾಗಿ ನಿಯಮಿಸಿ, ಮೂವರೂ ಒಗ್ಗಟ್ಟಿನಿಂದ ಕಾರ್ಯ ನಿರ್ವಹಿಸುವಂತೆ ಏರ್ಪಡಿಸಿದನು. ಸ್ವಲ್ಪಕಾಲ ಕಳೆದ ಮೇಲೆ ರಾಜನು ದೇಶದ ಅಭಿವೃದ್ಧಿ ಎಲ್ಲಿಯವರೆಗೆ ಬಂದಿದೆ ಎಂಬುದನ್ನು ನೋಡುವಾಗ, ಮೂವರು ಅಧಿಕಾರಿಗಳೂ ಪಥಕಗಳನ್ನು ಅಮಲು ಪಡಿಸುವ ರೀತಿ ಸರಿಯಾಗಿಲ್ಲವೆಂದು ಮಹಾರಾಜನಿಗೆ ತೋರಿತು. ತನ್ನ ರಾಜ್ಯವನ್ನು ರಜತಗಿರಿಯೊಂದಿಗೆ ಹೋಲಿಸಿ ನೋಡಿದಾಗ, ಎಲ್ಲಾ ವಿಧಗಳಲ್ಲಿಯೂ ಹಿಂದುಳಿದಿದ್ದ ನೆರೆಯ ರಾಜ್ಯವಾದ ರಜತಗಿರಿ ಇಂತಹ ಪಥಕಗಳನ್ನೇ ಅಮಲು ಪಡಿಸಿ ಬಹು ಬೇಗದಲ್ಲಿ ಅಭಿವೃದ್ಧಿಗೆ ಬಂದಿತ್ತು. ಅಲ್ಲಿ ಈ ಪಥಕಗಳನ್ನು ಸುಚಂದ್ರನೆಂಬ ಒಬ್ಬನೇ ಅಧಿಕಾರಿಯ ಮೂಲಕ ಅಮಲುಗೊಂಡು ಒಳ್ಳೆಯ ಫಲಿತ ಕೊಟ್ಟಿದೆ. ಇಲ್ಲಿ ಮಾತ್ರ ಹೀಗೇಕಾಗುತ್ತಿದೆ ?

ಒಂದು ದಿನ ಕನಕಾದಿತ್ಯ ರಾಜನು ಮಾತಿನ ಸಂದರ್ಭದಲ್ಲಿ ಈ ವಿಷಯವನ್ನು ತನ್ನ ಅಂತರಂಗಿಕನಾದ ವಿದೂಷಕ ವಿಶ್ವೇಶ್ವರನೊಂದಿಗೆ ಪ್ರಸ್ತಾಪಿಸುತ್ತ, "ನಮ್ಮ ದೇಶದಲ್ಲಿ ಮೂವರು ಅಧಿಕಾರಿಗಳಿದ್ದರೂ ಆಗದಿರುವ ಕಾರ್ಯಗಳು, ರಜತಗಿರಿಯಲ್ಲಿ ಸುಚಂದ್ರನೊಬ್ಬನಿಂದಲೇ ಜಯಪ್ರದವಾಗಿ ನಿರ್ವಹಿಸಲ್ಪಡುತ್ತಿದೆ. ಇದನ್ನು ನೋಡುವಾಗ ನಮ್ಮ ಅಧಿಕಾರಿಗಳು ಅಸಮರ್ಥರೆಂದೇ ಹೇಳಬೇಕಾಗಿದೆ" ಎಂದನು.

ಅದಕ್ಕೆ ವಿಶ್ವೇಶ್ವರನು, "ಮಹಾರಾಜರೇ, ಸುಚಂದ್ರನು ಸಮರ್ಥನಾದ ಅಧಿಕಾರಿ ಎಂಬುದು

ಜೆ. ರತ್ನ



ನಾನು ತಮ್ಮಲ್ಲಿ ಹೀಗೆ ಧೈರ್ಯದಿಂದ ಮನವಿ ಮಾಡಲು ಸಾಧ್ಯವಾಯಿತು " ಎಂದನು.

ವಿಶ್ವೇಶ್ವರನ ಮಾತು ಕೇಳಿ, ಮಹಾರಾಜನಿಗೆ ಏನೋ ಕುತೂಹಲವೂ ಆಸಕ್ತಿಯೂ ಉಂಟಾಗಿ, ಅದೇನೆಂದು ವಿವರಿಸುವಂತೆ ಹೇಳಿದನು.

" ಮಹಾರಾಜರೇ, ನೀವು ಸ್ವತಃ ಆರಿಸಿಕೊಂಡ ನೀಲ, ವಿನೀಲ ಮತ್ತು ನಿರ್ಮಲ ಈ ಮೂವರಲ್ಲಿ, ಒಬ್ಬೊಬ್ಬನನ್ನು ಪ್ರತ್ಯಪ್ರತ್ಯೇಕವಾಗಿ ತೆಗೆದುಕೊಂಡರೂ ಇಬ್ಬರು ಸುಚಂದ್ರರಿಗೆ ಸಮಾನರಾಗುವುದರಲ್ಲಿ ಸಂದೇಹವೇನಿಲ್ಲ. ಆದರೆ ಅವರಲ್ಲಿ ಯಾವ ಇಬ್ಬರನ್ನು ಮಾತ್ರವೋ ಸೇರಿಸಿ ತೆಗೆದುಕೊಂಡು ಹೋಲಿಸಿ ನೋಡಿದರೆ, ಒಬ್ಬ ಸುಚಂದ್ರನಿಗಷ್ಟೇ ಸಮಾನರಾಗುತ್ತಾರೆ. ಮತ್ತೊಂದು ಆಶ್ಚರ್ಯಕರವಾದ ವಿಷಯವೇನೆಂದರೆ ನಮ್ಮ ಅಧಿಕಾರಿಗಳು ಮೂವರನ್ನೂ ಕೂಡಿಸಿ ಲೆಕ್ಕಮಾಡಿ ಹೋಲಿಸಿದಾಗ ಕಡೇಪಕ್ಷ ಒಬ್ಬ ಸುಚಂದ್ರನಿಗೆ ಕೂಡಾ ಸಮಾನರಾಗುವುದಿಲ್ಲ ! ಆದರಿಂದಲೇ ಅಭಿವೃದ್ಧಿಗೆ ಕುಂದು ಬಂತೆಂದು ನನ್ನ ಅಭಿಪ್ರಾಯ " ಎಂದನು ವಿಶ್ವೇಶ್ವರ.

ಮಹಾರಾಜನು ಅವಹೇಳನೆಯಾಗಿ ನಕ್ಕು, " ನಮ್ಮ ಒಬ್ಬೊಬ್ಬ ಅಧಿಕಾರಿಯೂ ಇಬ್ಬರು ಸುಚಂದ್ರರಿಗೆ ಸಮಾನನೆಂದು ಮಾತು ಪ್ರಾರಂಭಿಸಿ, ಮೂವರನ್ನೂ ಕೂಡಿಸಿ ತೆಗೆದುಕೊಂಡಾಗ ಒಬ್ಬನಿಗೆ ಕೂಡಾ ಸಮಾನನಾಗುವುದಿಲ್ಲವೆನ್ನುವೆಯಲ್ಲ ! ನಿನ್ನ ತಲೆಕೆಳಗಿನ ಲೆಕ್ಕವನ್ನು ಕೇಳಿದ ಮೇಲೆ ಪಾಂಡಿತ್ಯದಲ್ಲಿ ನಿನ್ನ ಯೋಗ್ಯತೆ ಹೇಗಿದ್ದರೂ, ಲೆಕ್ಕದಲ್ಲಿ ಮಾತ್ರ ನಿನಗೆ ಸಣ್ಣ ಗುಣಾಕಾರ ಕೂಡಾ ಬಾರದೆಂದು ತಿಳಿಯುತ್ತದೆ " ಎಂದನು.

" ಮಹಾರಾಜಾ, ನನಗೆ ಸಣ್ಣ ಅಂಕೆಗಳನ್ನು ಹೆಚ್ಚಿಸುವ ಲೆಕ್ಕ ಬರುವುದಿಲ್ಲವೆಂದರೆ ಒಪ್ಪಿಕೊಳ್ಳುತ್ತೇನೆ. ಆದರೆ ಗಣಿತಶಾಸ್ತ್ರದಲ್ಲಿ ಪ್ರವೇಶವೇ ಇಲ್ಲ

ನಿಜ. ನಮ್ಮ ಅಧಿಕಾರಿಗಳು ಕೂಡಾ ಸಮರ್ಥತೆಯ ವಿಷಯದಲ್ಲಿ ಸಂದೇಹಿಸ ಬೇಕಾಗಿಲ್ಲ. ಒಬ್ಬೊಬ್ಬರೂ ಇಬ್ಬರು ಸುಚಂದ್ರರಿಗೆ ಸಮಾನರೆಂದು ನನ್ನ ದೃಢ ವಿಶ್ವಾಸ " ಎಂದನು.

ಅದನ್ನು ಕೇಳಿ ಕನಕಾದಿತ್ಯ ರಾಜನು ನಕ್ಕು, " ಯಾರ ದೇಶದವರನ್ನು ಆ ದೇಶದವರು ಹೊಗಳುವುದೂ ಮೆಚ್ಚುವುದೂ ಈ ಬಗೆಯ ಮಾತಿನಿಂದಲೇ ಅಲ್ಲವೇ ? " ಎಂದನು.

ಮಹಾರಾಜನ ಮಾತು ಕೇಳಿ ವಿಶ್ವೇಶ್ವರನು ಸಣ್ಣ ಮುಖ ಮಾಡಿಕೊಂಡು, " ಪ್ರಭೂ, ನನಗೆ ಗಣಿತಶಾಸ್ತ್ರದಲ್ಲಿ ಸಾಕಷ್ಟು ಪಾಂಡಿತ್ಯವಿದೆ ಎಂಬ ಸಂಗತಿಯನ್ನು ಈವರೆಗೂ ತಮಗೆ ಹೇಳಬೇಕಾದ ಸಂದರ್ಭ ಬಂದಿರಲಿಲ್ಲ. ನಾನು ಕುತೂಹಲಕ್ಕಾಗಿ ನಮ್ಮ ಅಧಿಕಾರಿಗಳ ಸಮರ್ಥತೆಯನ್ನು ಕುರಿತು, ರಜತಗಿರಿಯ ಸುಚಂದ್ರನೊಂದಿಗೆ ಹೋಲಿಸಿ ಕೆಲವು ಲೆಕ್ಕಗಳನ್ನು ತಯಾರಿಸಿದ್ದೇನೆ. ಆ ಕಾರಣದಿಂದಲೇ

ವೆಂದರೆ ಮಾತ್ರ ಒಪ್ಪಿಕೊಳ್ಳಲಾರೆ. ತಾವು ಅಪ್ಪಣೆ ಕೊಟ್ಟರೆ ನಮ್ಮ ಅಧಿಕಾರಿಗಳ ಸಮರ್ಥತೆಯ ವಿಷಯದಲ್ಲಿ ನಾನು ಗುಣಿಸಿದ ಪದ್ಧತಿಯನ್ನು ನಿಮಗೆ ವಿವರಿಸುತ್ತೇನೆ" ಎಂದನು ವಿಶ್ವೇಶ್ವರ.

ಅದೇನೆಂದು ವಿವರಿಸುವಂತೆ ಮಹಾರಾಜನು ತಲೆಯಾಡಿಸಿದನು.

"ನಮ್ಮ ಅಧಿಕಾರಿಗಳ ಮೇಧಾಶಕ್ತಿಯೂ, ಸಮರ್ಥತೆಯೂ ತಮಗೆ ಗೊತ್ತೇ ಇದೆ. ಅಂತಹ ಮೂವರು ವ್ಯಕ್ತಿಗಳಿಗೆ ಸಮಷ್ಟಿಯಾಗಿ ಕಾರ್ಯ ನಿರ್ವಹಿಸಬೇಕೆಂಬ ಬಾಧ್ಯತೆಯನ್ನು ನೀವು ಒಪ್ಪಿಸಿದ್ದೀರಿ. ಒಂದೇ ಅರ್ಹತೆಗಳಿರುವ ಈ ಮೂವರ ಅಹಂಭಾವ ವ್ಯಕ್ತಿತ್ವಗಳು ಒಂದಕ್ಕೊಂದು ಸಹಕರಿಸಿ ಅವರನ್ನು ಒಂದೇ ಹಗ್ಗದ ಮೇಲೆ ನಡೆಸಲು ಸ್ವಲ್ಪವೂ ಅನುಕೂಲವಾಗಲಾರದು. ಆದುದರಿಂದ ಈ ಮೂವರನ್ನೂ ಕೂಡಿಸಿ ಲೆಕ್ಕ ತೆಗೆದುಕೊಂಡಾಗ ಒಬ್ಬ ಸುಚಂದ್ರನಿಗೆ ಕೂಡಾ ಸಮ ಬರುವುದಿಲ್ಲವೆಂದು ಹೇಳಿದೆ. ಇಬ್ಬರಾದರೆ ಮಾತ್ರ ಮೊದಲು ಸ್ವಲ್ಪ ಗೊಡವೆಗಳು ಎದ್ದರೂ ಕಡೆಗೆ ಒಬ್ಬರ ಅಭಿಪ್ರಾಯದೊಂದಿಗೆ ಇನ್ನೊಬ್ಬರು ರಾಜಿಗೆ ಬರಲು ಸಾಧ್ಯವಿದೆ. ಆ ವಿಧವಾಗಿ ಅವರು ಒಬ್ಬ ಸುಚಂದ್ರನಿಗೆ ಸಮಾನರಾಗಬಲ್ಲರು" ಎಂದು ಅಲ್ಲಿಗೆ ನಿಲ್ಲಿಸಿದನು ವಿಶ್ವೇಶ್ವರ.

ಮಹಾರಾಜನು ಬಹಳ ಕುತೂಹಲದಿಂದ, "ಹುಂ, ನಿಲ್ಲಿಸಿದೆ ಏಕೆ? ಹೇಳು ಹೇಳು" ಎಂದನು.

"ಸಹಜವಾಗಿ ತುಂಬಾ ಪ್ರತಿಭಾಶಾಲಿಗಳಾದ ನಮ್ಮ ಅಧಿಕಾರಿಗಳು ಮೂವರಲ್ಲಿ ಯಾವ ಒಬ್ಬನಿಗೋ ತಾವು ಪದವಿಯ ಬಾಧ್ಯತೆಯನ್ನು ಒಪ್ಪಿಸಿಬಿಟ್ಟರೆ, ಆ ಒಬ್ಬನೇ ಇಬ್ಬರು ಸುಚಂದ್ರರ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸುವನೆಂದು ನಾನು ಖಚಿತವಾಗಿ ಹೇಳಬಲ್ಲೆನು. ಆಗ ರಜತಗಿರಿಗಿಂತಲೂ ನಮ್ಮ ದೇಶ ಹೆಚ್ಚಿನದಾಗುತ್ತದೆ" ಎಂದನು ವಿಶ್ವೇಶ್ವರ.

ವಿಶ್ವೇಶ್ವರನ ವಿವರಣೆಯಿಂದ ಕನಕಾದಿತ್ಯ ರಾಜನಿಗೆ ಅವನ ಲೆಕ್ಕಗಳ ಹಿಂದೆ ಅಡಗಿರುವ ತತ್ವವೂ, ಪ್ರತಿಭಾವಂತ ವ್ಯಕ್ತಿಗಳ ಮಾನಸಿಕ ಧೋರಣೆಯೂ ಅರ್ಥವಾಯಿತು.

ಆಮೇಲೆ ರಾಜನು ಆ ಅಧಿಕಾರಿಗಳನ್ನು ಸರದೀವಾರಿಯಾಗಿ ಪದವಿ ಬಾಧ್ಯತೆಯನ್ನು ನಿರ್ವಹಿಸಬೇಕೆಂದು ಆದೇಶ ಮಾಡಿದನು.

ಸ್ವಲ್ಪಕಾಲ ಕಳೆದ ಮೇಲೆ ಮಹಾರಾಜನಿಗೆ ತನ್ನ ಅಧಿಕಾರಿಗಳು ಸುಚಂದ್ರನಿಗಿಂತಲೂ, ವಿದೂಷಕನು ವಿವರಿಸಿ ತೋರಿಸಿದ ಲೆಕ್ಕದಲ್ಲಿ ಕಂಡು ಬಂದುದಕ್ಕಿಂತಲೂ ಸಮರ್ಥರಾಗಿರುವರೆಂದು ಗೊತ್ತಾಗಿ, ತೃಪ್ತಿಯಾಯಿತು.



# ಸುಂದರ ಚಿತ್ರ

ಅವಂತಿಯ ರಾಜಕುಮಾರಿ ಅತ್ಯಂತ ಸುಂದರಿ.

ತನ್ನ ಮದುವೆಗೆ ಅವಳು ಒಂದು ಷರತ್ತು ಇಟ್ಟಳು. ಪ್ರಪಂಚದೊಳಗೆಲ್ಲಾ ಹೆಚ್ಚಿನ ಅಂದವಾಗಿರುವುದನ್ನು ಚಿತ್ರವಾಗಿ ಬರೆದು ತಂದ ಚಿತ್ರಕಾರನಾದ ರಾಜಕುಮಾರನನ್ನು ಮಾತ್ರವೇ ತಾನು ವಿವಾಹ ಮಾಡಿಕೊಳ್ಳುತ್ತೇನೆಂಬುದೇ ಆ ಷರತ್ತು.

ಅನೇಕ ಮಂದಿ ರಾಜಕುಮಾರರು ಅದ್ಭುತವಾದ ಪ್ರಕೃತಿ ದೃಶ್ಯಗಳನ್ನೂ, ವ್ಯಕ್ತಿಗಳನ್ನೂ ಚಿತ್ರಿಸಿ ತಂದರು. ಅವುಗಳಲ್ಲಿ ಯಾವುದೂ ಪ್ರಪಂಚದೊಳಗೆಲ್ಲಾ ಹೆಚ್ಚಿನ ಸೌಂದರ್ಯವಾಗಿಲ್ಲವೆಂದು ಹೇಳುತ್ತಾ ಅವಳು ನಿರಾಕರಿಸಿಕೊಂಡೇ ಬಂದಳು.

ಕಡೆಗೆ ಮಗಧ ರಾಜಕುಮಾರನು ಚಿತ್ರಿಸಿ ತಂದ ಚಿತ್ರಪಟವನ್ನು ನೋಡಿ, ಪ್ರಪಂಚದಲ್ಲಿ ಇದಕ್ಕಿಂತ ಹೆಚ್ಚಿನ ಅಂದವಾದುದೇನಿಲ್ಲವೆಂಬುದನ್ನು ಒಪ್ಪಿಕೊಂಡಳು.

ಇಷ್ಟಕ್ಕೂ ಮಗಧ ರಾಜಕುಮಾರನು ಚಿತ್ರಿಸಿದ್ದು ಆ ರಾಜಕುಮಾರಿಯದೇ ಚಿತ್ರ !

ವಿವಾಹವು ವೈಭವವಾಗಿ ನಡೆದಮೇಲೆ, ಅವಂತಿ ರಾಜಕುಮಾರಿ ತನ್ನ ಗಂಡನೊಂದಿಗೆ, "ಅಲ್ಲಾ, ಪ್ರಪಂಚದಲ್ಲಿ ಎಲ್ಲರಿಗಿಂತ ನಾನೇ ಹೆಚ್ಚಿನ ಸುಂದರಿ ಎಂದು ಹೇಗೆ ನಿರ್ಧಾರ ಮಾಡಿದಿರಿ ?" ಎಂದು ಕೇಳಿದಳು.

"ಆದರಲ್ಲೇನಿದೆ ಮಹಾ ? ನಿನ್ನ ಸ್ಥಾನದಲ್ಲಿ ಯಾರೇ ಇದ್ದರೂ, ನಾನು ಅವರ ಚಿತ್ರವನ್ನೇ ಬರೆಯುತ್ತಿದ್ದೆ !" ಎಂದನು ಮಗಧ ರಾಜಕುಮಾರ ಮುಗುಳು ನಗುತ್ತ.

ರಾಜಕುಮಾರಿ ಮೊದಲು ಅಪ್ರತಿಭಳಾಗಿ, ಆಮೇಲೆ ರಾಜಕುಮಾರನ ಬುದ್ಧಿಮತ್ತತೆಗೆ ಸಣ್ಣಕೆ ನಕ್ಕಳು.





# ರಾಜನಾದ ಮಾವುತ

ಬ್ರಹ್ಮದತ್ತ ರಾಜನು ಕಾಶೀ ರಾಜ್ಯವನ್ನು ಪಾಲಿಸಿ ಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ವಾರಣಾಸೀ ನಗರದಲ್ಲಿ ಒಬ್ಬ ಸಾಧುವಾಗಿ ಅವತರಿಸಿ ಜೀವಿಸಿ ಕೊಂಡಿದ್ದನು. ಒಂದು ದಿನ ಅವನು ಭಿಕ್ಷೆಗಾಗಿ ನಗರಕ್ಕೆ ಬಂದು ಒಬ್ಬ ಮಾವುತನ ಮನೆಯ ಮುಂದೆ ಭಿಕ್ಷೆಗೆ ನಿಂತನು.

ಆ ಮನೆಯ ಒಡೆಯನಾದ ಮಾವುತನು ಆನೆಗಳನ್ನು ಹಿಡಿಯುವುದರಲ್ಲಿ, ಅವುಗಳನ್ನು ಪಳಗಿಸಿ ಶಿಕ್ಷಣ ಕೊಡುವುದರಲ್ಲಿ ಬಹಳ ಸಮರ್ಥನು. ಅವನಿಗೆ ರಾಜನ ದರಬಾರಿನಲ್ಲಿ ಒಂದು ಸ್ಥಾನವಿದ್ದಿತು.

ಮಾವುತನು ಬೋಧಿಸತ್ವನಿಗೆ ಅತ್ಯಂತ ಭಕ್ತಿ ಪೂರ್ವಕವಾಗಿ ನಮಸ್ಕರಿಸಿ, ಮನೆಯೊಳಗೆ ಕರೆದು ಕೂಡಿಸಿ ಭೋಜನವಿಡಿಸಿದನು. ತರುವಾಯ ಬಹಳ ವಿನಯದಿಂದ, "ಮಹಾನುಭಾವರೇ, ತಾವು ಕೆಲವು ದಿನಗಳವರೆಗೆ ನನ್ನ ಮನೆಯಲ್ಲಿದ್ದು ಒಳ್ಳೆಯ ಬೋಧನೆಗಳಿಂದ ಉದ್ಧರಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಬೋಧಿಸತ್ವನು ಅವನ ಪ್ರಾರ್ಥನೆಯನ್ನು ಮನ್ನಿಸಿ ಒಂದು ವಾರದ ವರೆಗೆ ಅಲ್ಲಿದ್ದನು. ಅನಂತರ ಹೊರಟು ಹೋಗುವಾಗ, ಅವನಿಗೆ ಒಳ್ಳೆಯ ಭವಿಷ್ಯತ್ತು ಬರಲೆಂದು ಆಶೀರ್ವಾದ ಮಾಡಿದನು. ಈ ಆಶೀರ್ವಾದವೇ ಮಾವುತನ ಉನ್ನತ ಸ್ಥಿತಿಗೆ ಕಾರಣವಾಯಿತು.

ಒಂದು ದಿನ ರಾತ್ರಿ ನಗರದೊಳಗಿನ ಒಂದು ದೇವಾಲಯದ ಮಂಟಪದ ಮೇಲೆ ಕಟ್ಟಿಗೆ ಒಡೆದು ಜೀವಿಸುವವನೊಬ್ಬನು ಮಲಗಿಕೊಂಡಿದ್ದನು. ಹತ್ತಿರದ ಮರದ ಕೊಂಬೆಯಲ್ಲಿ ಕೆಲವು ಕೋಳಿಗಳು ನಿದ್ರಿಸಿಕೊಂಡಿದ್ದವು.

ಮರದ ಕೆಳಗೆ ಏನೋ ಶಬ್ದವಾದುದರಿಂದ, ಒಂದು ಹುಂಜಕ್ಕೆ ಎಚ್ಚರವಾಗಿ ಗಟ್ಟಿಯಾಗಿ ಫಡಫಡನೆ ರೆಕ್ಕೆಗಳನ್ನು ಬಡಿದುಕೊಂಡಿತು. ಆಗ ಒಣಗಿದ ರೆಂಬೆಯೊಂದು ಮುರಿದು ಕೆಳಗಿನ ಕೊಂಬೆಯಲ್ಲಿ ನಿದ್ರಿಸಿಕೊಂಡಿದ್ದ ಇನ್ನೊಂದು ಹುಂಜದ ಮೇಲೆ ಬಿದ್ದು, ಅದಕ್ಕೂ ಎಚ್ಚರವಾಯಿತು.

ಆ ಹುಂಜವು ಕೋಪದಿಂದ ತಲೆ ಎತ್ತಿ ಮೇಲೆ ನೋಡುತ್ತ, "ಏರ್ರ್! ಅಷ್ಟೊಂದು ಪೊಗರು ಒಳ್ಳೆಯದಲ್ಲ ಗೊತ್ತಾ? ನನ್ನನ್ನು ಯಾರೆಂದು ಕೊಂಡೇ? ಎನ್ನ ಮಹಿಮೆ ಸಾಮಾನ್ಯವಲ್ಲ! ನನ್ನ



ಮಾಂಸವನ್ನು ತಿಂದ ಯಾವನಿಗೇ ಆಗಲಿ, ದೊಡ್ಡ ನಿಧಿ ಸಿಕ್ಕಿ ತೀರುತ್ತದೆ! ಜಾಗ್ರತೆ!" ಎಂದು ಹೇಳಿತು.

ಆ ಮಾತು ಕೇಳಿ ಮೇಲಿನ ಕೊಂಬೆಯಲ್ಲಿದ್ದ ಹುಂಜವು, ಕೆಕೆಕೆಕೆ ಎಂದು ನಗಾಡಿ, "ಸಾಕು ಬಿಡು. ನನ್ನ ದೊಡ್ಡತನ ನಿನಗೇನು ಗೊತ್ತಿದೆ? ನನ್ನ ಮಾಂಸವನ್ನು ತಿಂದವನು ತಪ್ಪದೆ ದೇಶವನ್ನಾಳುವ ರಾಜನೇ ಆಗುತ್ತಾನೆ!" ಎಂದು ತನ್ನ ರಹಸ್ಯವನ್ನು ಬಹಿರಂಗ ಪಡಿಸಿತು.

ಈ ಸಂಭಾಷಣೆಗಳನ್ನು ಎಚ್ಚರದಲ್ಲಿರುವ ಕಟ್ಟಿಗೆ ಒಡೆಯುವವನು ಕೇಳಿದನು. ಅವನಿಗಾದ ಆನಂದ ಅಷ್ಟಿಷ್ಟಲ್ಲ. ಅವನು ಸ್ವಲ್ಪ ಹೊತ್ತು ಕಾದಿದ್ದು, ಕೋಳಿಗಳು ಮತ್ತೆ ನಿದ್ದೆಗೆ ಇಳಿದುವೆಂದು ದೃಢ ಪಡಿಸಿಕೊಂಡು, ನಿಃಶಬ್ದವಾಗಿ ಮರದ ಮೇಲಕ್ಕೆ ತೆವಳಿಕೊಂಡು ಏರಿ ಹೋದನು. ತಾನು ರಾಜನೇ ಆಗಲು ಸಾಧ್ಯವಿರುವಾಗ ನಿಧಿಯೊಂದು ಲೆಕ್ಕವಲ್ಲ ಎಂದುಕೊಂಡು ಅವನು ಕೆಳಗಿನ ಕೊಂಬೆಯ ಹುಂಜವನ್ನು ಬಿಟ್ಟು, ಮೇಲಿನ ಕೊಂಬೆಯಲ್ಲಿದ್ದ ಹುಂಜವನ್ನೇ ಹಿಡಿದನು. ಹಾಗೆಯೇ ಅದು ಮಿಸುಕಾಡದಂತೆ ಒತ್ತಿ ಎತ್ತಿಕೊಂಡು ಮರದಿಂದಿಳಿದು ಸೀದಾ ತನ್ನ ಮನೆಗೆ ಹೋದನು.

ಅವನು ಮನೆ ತಲಪಿದ ಕೂಡಲೇ ಹೆಂಡತಿಯನ್ನು ಕರೆದು, "ಈ ಸಮಾಚಾರ ಗೊತ್ತೇನೇ? ನೀನು ಇನ್ನು ಮೇಲೆ ರಾಣಿಯಾಗಲಿರುವಿ! ಮಹಾರಾಣಿ!" ಎಂದನು.

ಅವನ ಹೆಂಡತಿ ಆ ಮಾತು ಕೇಳಿ ಕೋಪದಿಂದ, "ಏನು ಮಾತು ಹುಚ್ಚುಚ್ಚು! ಬೇಡದ ಹರಟೆ ನನ್ನ ಹತ್ತಿರ ಬೇಡ. ನಾನು ಕಟ್ಟಿಗೆ ಒಡೆದು ಬದುಕುವವನ ಹೆಂಡತಿ. ಇದಕ್ಕಾಗಿ ನಾನೇನೂ ಚಿಂತಿಸಿ ಅತ್ತು ಕೂಗಿಕೊಂಡಿಲ್ಲ! ನಿಮ್ಮ ಸುರೂಪಕ್ಕೆ ರಾಜಾ ಬೇರೆಯಾ!" ಎಂದಳು.

ಕಟ್ಟಿಗೆಯವನು ಗಟ್ಟಿಯಾಗಿ ನಗುತ್ತ, "ಹುಚ್ಚಳೇ! ಕಟ್ಟಿಗೆ ಒಡೆದು ಬದುಕುವ ನಿನ್ನ ಗಂಡ ಸಿಂಹಾಸನವೇರಲಿದ್ದಾನೆ ಕಣೇ! ಇಕೋ, ಮೊದಲು ಈ ಹುಂಜ ಕೋಳಿಯನ್ನು ಕೊಯಿದು ಚಂದಾಗಿ ಅಡಿಗೆ ಮಾಡು." ಎಂದು ಹೇಳಿ ತಾನು ತಂದ ಆ ಕೋಳಿಯ ಮಾಂಸಕ್ಕಿರುವ ಮಹಿಮೆಯನ್ನು ವಿವರವಾಗಿ ಹೇಳಿದನು.

ಆಗ ಅವನ ಹೆಂಡತಿಗಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವಳು ಬೇಗ ಬೇಗನೇ ಕೋಳಿಯನ್ನು ಕೊಯಿದು ಅಡಿಗೆ ಮಾಡಿದಳು. "ಬಾ, ನಾವು ಮೊದಲು ನದಿಯಲ್ಲಿ ಸ್ನಾನ ಮಾಡಿ, ಪರಿಶುಭ್ರವಾಗಿ ಅಲ್ಲಿಯೇ ಕುಳಿತು ಊಟ ಮಾಡೋಣ" ಎಂದನು ಕಟ್ಟಿಗೆಯವನು.

ಇಬ್ಬರೂ ಸ್ವಲ್ಪ ಅನ್ನದೊಂದಿಗೆ ಕೋಳಿಯ ಮಾಂಸವನ್ನು ಸೇರಿಸಿ, ಒಂದು ಗಡಿಗೆಯಲ್ಲಿ ತುಂಬಿಸಿ, ಅದರ ಬಾಯಿಗೆ ಮುಚ್ಚಳವಿಟ್ಟು ಬಿಗಿದು ಕಟ್ಟಿ, ಎತ್ತಿಕೊಂಡು ನದಿಯ ಹತ್ತಿರ ಹೋದರು.

ಅವರು ಆ ಗಡಿಗೆಯನ್ನು ನದಿಯ ದಂಡೆಯಲ್ಲಿಟ್ಟು, ಸ್ನಾನ ಮಾಡಲು ನದಿಗೆ ಇಳಿದರು. ನೋಡ ನೋಡುತ್ತಿದ್ದಂತೆ ನದಿ ಉಕ್ಕಿತು. ಆ ಪ್ರವಾಹದ ವೇಗದಲ್ಲಿ ಗಡಿಗೆ ಸಿಕ್ಕಿ ಚಲಿಸಿ, ಹೊಡೆದುಕೊಂಡು ಹೋಯಿತು.

ಕಟ್ಟಿಗೆಯವನು ಎದೆಬಡೆದು ತಲೆ ಚಚ್ಚಿ ಕೊಳ್ಳುತ್ತಾ, "ನಾನು ರಾಜ ನೀನು ರಾಣಿಯಾಗುವ ಅದೃಷ್ಟ ಹೋಯಿತಲ್ಲೇ! ಏನು ಮಾಡಲೇ!" ಎಂದನು. ಇಬ್ಬರೂ ಸರ್ವನಾಶವಾದಂತೆ ದುಃಖಿಸುತ್ತಾ ಬರಿಗೈಯನ್ನು ತಲೆಯ ಮೇಲಿಟ್ಟು ಮನೆಯ ದಾರಿ ಹಿಡಿದರು.

ಆಗ ಆ ನದಿ ಹರಿಯುವ ಕಡೆಯಲ್ಲಿ ದೂರದೊಂದು ತಿರುವಿನ ಹತ್ತಿರ ಬೋಧಿಸತ್ವನಿಗೆ ಆತಿಥ್ಯವಿತ್ತ ಮಾವುತನು, ಒಂದು ಆನೆಯನ್ನು ನದಿಯಲ್ಲಿ ಮೀಯಿಸಿಕೊಂಡಿದ್ದನು. ಅವನಿಗೆ ನದಿಯ ಪ್ರವಾಹದಲ್ಲಿ ಹೊರಳಿಕೊಂಡು ಬರುವ ಗಡಿಗೆಯೊಂದು ಕಂಡಿತು. ಅವನು ಅದನ್ನು ಹಿಡಿದುಕೊಂಡು, ಅದರ ಬಾಯಿಯನ್ನು ಬಿಚ್ಚಿ ನೋಡಲು, ಒಳಗೆ ಆಗಲೇ ಅಟ್ಟು ಕಮ್ಮಗಿನ ಕೋಳಿ ಮೇಲೋಗರ ಸೇರಿದ ಅನ್ನವಿರುವುದು ಕಂಡಿತು. ಆ ಮಾವುತನು ಆಶ್ಚರ್ಯಪಡುತ್ತ, ಚೆನ್ನಾಗಿ ಹಸಿವೆಯಾಗಿದ್ದುದರಿಂದ, ಗಡಿಗೆಯಲ್ಲಿರುವುದನ್ನು ಸವಿದು ಸವಿದು ಪೂರ್ತಿಯಾಗಿ ನೆಕ್ಕಿ ತಿಂದನು.

ಇದು ನಡೆದ ಮೂರನೆಯ ದಿನ ಆಕಸ್ಮಾತ್ತಾಗಿ ವಾರಣಾಸಿಯ ಮೇಲೆ ಶತ್ರು ಸೈನ್ಯವು ದಂಡೆತ್ತಿ ಬಂದು ಬಿತ್ತು. ರಾಜನು ಯುದ್ಧಕ್ಕೆ ಸಿದ್ಧನಿಲ್ಲದೆ, ಮಾವುತನ ವೇಷ ಹಾಕಿಕೊಂಡು, ಮಾವುತನಿಗೆ ರಾಜೋಚಿತವಾದ ದುಸ್ತುಗಳನ್ನೂ, ಇತರ ಅಲಂಕಾರಗಳನ್ನೂ ಹಾಕಿ ಆನೆಯ ಮೇಲೆ ಕೂಡಿಸಿದನು. ಮಾವುತನ ವೇಷದಲ್ಲಿ ತನಗೆ ಶತ್ರುಗಳಿಂದ ಅಪಾಯವಾಗದೆಂದು ಅವನ ಭಾವನೆಯಾಗಿತ್ತು.

ದಂಡೆತ್ತಿ ಬಂದ ಶತ್ರುಗಳು ರಾಜನನ್ನು ಜೀವದೊಂದಿಗೆ ಹಿಡಿಯಬೇಕೆಂದು ತಂತ್ರ ಹೂಡಿದರು. ಆ ಕಾರಣದಿಂದ ಅವರು ಮಾವುತನನ್ನು ಕೊಂದು,



ಅಂಬಾರಿಯಲ್ಲಿರುವ ರಾಜನನ್ನು ಬಂಧಿಸಲು ಮಾವುತನ ಮೇಲೆ ಬಾಣಪ್ರಯೋಗ ಮಾಡತೊಡಗಿದರು. ಆ ಮಾವುತನೇ ರಾಜನೆಂದು ಅವರಿಗೆ ತಿಳಿಯದು.

ಶತ್ರುಗಳು ಪ್ರಯೋಗಿಸಿದ ಬಾಣಗಳಿಂದ ಮಾವುತನ ವೇಷದಲ್ಲಿದ್ದ ರಾಜನು ಸತ್ತುಬಿದ್ದನು. ಆಗ ಮಾವುತನಿಗೆ ಶತ್ರುಗಳ ಗತ್ತು ಏನೆಂಬುದು ಅರ್ಥವಾಯಿತು. ಅವನು ಯುದ್ಧರಂಗದಿಂದ ಓಡಿಹೋಗಲಿಲ್ಲ. ಹಗೆ ತೀರಿಸಿಕೊಳ್ಳಬೇಕೆಂಬ ಹಟದಿಂದಲೂ ಧೈರ್ಯದಿಂದಲೂ ಶತ್ರುಗಳನ್ನು ಇದಿರಿಸಿ ಭಯಂಕರವಾಗಿ ಹೋರಾಡಿದ ಆ ಮಾವುತ.

ಇದು ವಾರಣಾಸಿಯ ಸೈನಿಕರಿಗೆ ಅಪಾರ ಧೈರ್ಯವನ್ನು ತಂದಿತು. ಅವರು ಹಸಿದ ಸಿಂಹಗಳ ಹಾಗೆ ಶತ್ರು ಸೈನಿಕರ ಮೇಲೆ ಹಾರಿದರು. ಸ್ವಲ್ಪಹೊತ್ತಿಗೆ ಸತ್ತವರು ಸಾಯಲು, ಉಳಿದ ಶತ್ರು ಸೈನಿಕರು ಯುದ್ಧರಂಗವನ್ನು ಬಿಟ್ಟು ಓಡಿಹೋದರು. ಶತ್ರು ರಾಜನು ಮಾವುತನ, ಈಟಿಯ ತಿವಿತಕ್ಕೆ ಸಿಕ್ಕಿ ಯುದ್ಧರಂಗದಲ್ಲೇ ಸತ್ತುಬಿದ್ದನು.

ಯುದ್ಧವು ಮುಗಿಯಿತು. ಶತ್ರುಗಳಿಂದ ಜಯಿಸಲ್ಪಟ್ಟ ತಮ್ಮ ವಿಜಯಕ್ಕೆ ಕಾರಣನಾದವನು ತಮ್ಮ ರಾಜನು ಅಲ್ಲವೆಂದೂ, ತಮ್ಮ ಆಸ್ಥಾನದ ಮಾವುತನೆಂದೂ ಮಂತ್ರಿಗಳೂ, ಇತರ ರಾಜೋದ್ಯೋಗಿಗಳೂ ತಿಳಿದುಕೊಂಡರು. ರಾಜನು ಸತ್ತುಹೋದುದರಿಂದ ಆ ಸ್ಥಾನದಲ್ಲಿ ಇನ್ನೊಬ್ಬ ರಾಜನು ಅಗತ್ಯವಾಗಿತ್ತು. ಸತ್ತುಹೋದ ರಾಜನಿಗೆ ಸಂತಾನವೂ ಇರಲಿಲ್ಲ.

ಇದನ್ನೆಲ್ಲ ಮನಗಂಡು ಆಸ್ಥಾನದ ಪ್ರಧಾನ ಪುರೋಹಿತನು ಎಲ್ಲರನ್ನೂ ನೋಡಿ, "ನಮ್ಮ ರಾಜನೇ ಸ್ವತಃ ತನ್ನ ದುಸ್ತು, ಆಭರಣ, ಕಿರೀಟ ಮೊದಲಾದ ಲಾಂಛನಗಳನ್ನು ಮಾವುತನಿಗೆ ಕೊಟ್ಟಿದ್ದಾನೆ. ಆದುದರಿಂದ ಈ ಮಾವುತನೇ ನಮಗೆ ರಾಜನಾಗಲು ಅರ್ಹನು" ಎಂದನು.

"ಆ ಮಾತು ನಿಜ. ಮಾವುತನ ಪರಾಕ್ರಮದಿಂದಲೇ ಶತ್ರು ರಾಜನು ಸೋತು ಸತ್ತನು. ವಾರಣಾಸಿ ರಕ್ಷಿಸಲ್ಪಟ್ಟಿತು. ಆದುದರಿಂದ ಮಾವುತನೇ ಸಿಂಹಾಸನಕ್ಕೆ ನ್ಯಾಯವಾದ ಹಕ್ಕುದಾರನು" ಎಂದನು ಪ್ರಧಾನ ಮಂತ್ರಿ.

ಸೇನಾನಾಯಕರೂ ಇತರ ಪ್ರಧಾನ ಉದ್ಯೋಗಸ್ಥರೂ ಆ ಮಾತುಗಳಿಗೆ ತಮ್ಮ ಅಮೋದನೆಯನ್ನು ತಿಳಿಯಪಡಿಸಿದರು.

ಈ ರೀತಿಯಾಗಿ ಮಾವುತನು ರಾಜನಾದನು. ಅವನು ಕೇಳಿಕೊಂಡ ಪ್ರಕಾರ ಬೋಧಿಸತ್ವನು ರಾಜನ ಪ್ರಧಾನ ಸಲಹಾದಾರನಾಗಿರಲಿಕ್ಕೆ ಅಂಗೀಕರಿಸಿಕೊಂಡನು. ಹೀಗಾಗಿ ಮಾವುತನ ರಾಜ್ಯಭಾರ ಬಹಳ ಚೆನ್ನಾಗಿ ನಡೆಯಿತು.





# ಛತ್ರಪತಿ ಶಿವಾಜಿ - ೨

ತಮ್ಮ ನಾಯಕನಾದ ಶಿವಾಜಿ ಮೊಗಲರ ಬಂಧನದಿಂದ ತಪ್ಪಿಸಿಕೊಂಡು ಬಂದುದನ್ನು ನೋಡಿ, ಮಹಾರಾಷ್ಟ್ರರು ಅತ್ಯಾನಂದದಿಂದ ಉತ್ಸವ ಮಾಡಿಕೊಂಡರು. ೧೬೭೪ ನೇ ವರ್ಷದಲ್ಲಿ ಛತ್ರಪತಿ ಬಿರುದಿನೊಂದಿಗೆ ಶಿವಾಜಿ ಮಹಾರಾಷ್ಟ್ರರಿಗೆ ರಾಜನಾದನು.

ಮಹಾರಾಷ್ಟ್ರರಿಗೂ ಮೊಗಲರಿಗೂ ಆಗಾಗ ಯುದ್ಧ ನಡೆಯುತ್ತಿದ್ದುವು. ಅಪೂರ್ವವಾದ ಧೈರ್ಯ ಸಾಹಸಗಳಿಂದ, ಆದರ್ಶವಾದ ನಡವಳಿಕೆಗಳಿಂದ ಶಿವಾಜಿ ತನ್ನ ಅನುಚರರಿಗೆ ಉತ್ಸಾಹಕಾರಕನಾದನು. ಒಂದು ಸಾರಿ ಶಿವಾಜಿಯ ಸೇನಾನಿ ಬಾಜೀಪ್ರಭು, ತಮ್ಮ ನಾಯಕನು ಸುರಕ್ಷಿತ ಸ್ಥಾನವನ್ನು ಸೇರಲಿಕ್ಕೆಂದು, ಗುಹೆಯ ಮುಖದ್ವಾರಕ್ಕೆ ಅಡ್ಡನಿಂತು ಒಬ್ಬಂಟಿಗನಾಗಿ ಶತ್ರುಸೇನೆಯನ್ನು ತಡೆಯುತ್ತ, ತನ್ನ ಪ್ರಾಣವನ್ನೇ ಅರ್ಪಿಸಿದನು.





ಸೋತುಹೋದ ಶತ್ರುವಿನಲ್ಲಿ ಶಿವಾಜಿ ಆದರಪೂರ್ವಕವಾಗಿಯೇ ವ್ಯವಹರಿಸಿದನು. ಅವನಿಗೆ ಹಿಂದೂ ಮತದ ಮೇಲೆ ಅತ್ಯಂತ ಅಭಿಮಾನವಿದ್ದರೂ ಇತರ ಮತಗಳನ್ನು ಕೂಡ ಗೌರವಿಸುತ್ತಿದ್ದನು. ಒಮ್ಮೆ ಅವನಿಗೆ ಲಭಿಸಿದ ಖುರಾನ್ ಗ್ರಂಥದ ಪ್ರತಿಯನ್ನು ಒಬ್ಬ ಮುಸ್ಲಿಮ್‌ಗೆ ಬಹುಮಾನವಾಗಿ ಕೊಟ್ಟನು.



ಕಲ್ಯಾಣದ ಪಾಲಕನಾದ ಮುಲಾನ್ ಅಹ್ಮದ್ ಶಿವಾಜಿಯ ಸೇನಾಪತಿಯಾದ ಅಬಾಜೀ ಸೋನ್ ದೇವನ ಕೈಯಲ್ಲಿ ಸೋತುಹೋದನು. ಆಗ ಆವನು ಶಿವಾಜಿಯನ್ನು ಪ್ರಸನ್ನ ಮಾಡಿಕೊಳ್ಳಲು ಸುಂದರಿಯಾದ ತನ್ನ ಮಗಳನ್ನು ಶಿವಾಜಿಗೆ ಬಹುಮಾನವಾಗಿ ಕಳುಹಿಸಿದನು. ಆದರೆ ಶಿವಾಜಿ ಆವಳನ್ನು ನೋಡುತ್ತಲೇ "ನನ್ನ ತಾಯಿ ಇಷ್ಟು ಸುಂದರಿಯಾಗಿರುತ್ತಿದ್ದರೆ ನಾನು ಇನ್ನಿಷ್ಟು ಸುಂದರನಾಗಿರುತ್ತಿದ್ದೆ" ಎಂದು, ತಂದೆ ಮಗಳಿಗೆ ಕೊಡುವ ಹಾಗೆ, ಬೆಲೆ ಬಾಳುವ ಕಾಣಿಕೆಗಳನ್ನು ಕೊಟ್ಟು ಆವಳನ್ನು ತಂದೆ ತಾಯಿಗಳ ಬಳಿಗೇ ಕಳುಹಿಸಿದನು.

ಮತ ಸಂಬಂಧವಾದ ಉಪನ್ಯಾಸ ಕೇಳುವು ದೆಂದರೆ ಶಿವಾಜಿಗೆ ಬಹಳ ಇಷ್ಟ. ಒಂದು ಸಾರಿ ಅವನು ತುಕಾರಾಂನ ಉಪನ್ಯಾಸ ಕೇಳಿಕೊಂಡಿರು ವಾಗ, ಆ ಸಂಗತಿ ಶತ್ರುಗಳಿಗೆ ಗೊತ್ತಾಯಿತು. ಕೂಡಲೇ ಶತ್ರು ಸೈನಿಕರು ಆ ಸಭೆಯಲ್ಲಿ ಶೋಧಿಸತೊಡಗಿದರು. ಆಗ ಶಿವಾಜಿಯನ್ನು ಹೋಲುವವನೊಬ್ಬನು ಅಲ್ಲಿಂದೆದ್ದು ಹಾರಿ ಓಡಿ ಹೋಗುವುದನ್ನು ನೋಡಿದ ಸೈನಿಕರು, ಅವನ ಬೆನ್ನು ಹಿಡಿದು ಓಡಿದರು. ಸಭೆ ಮುಗಿದ ಮೇಲೆ ಶಿವಾಜಿ ಹಾಯಾಗಿ ಮನೆಗೆ ಹೋಗಿ ಸೇರಿದನು.





ಸಾಧುವಾದ ರಾಮದಾಸರ ಸಾಂಗತ್ಯದಲ್ಲಿ ಹೊತ್ತು ಕಳೆಯುವುದೆಂದರೆ ಶಿವಾಜಿಗೆ ಬಹಳ ಇಷ್ಟ. ಆದರೆ ಅದಕ್ಕಿಂತ ಹೆಚ್ಚಿನ ಕಾರ್ಯ ಗಳನ್ನು ಸಾಧಿಸಬೇಕಾದವನು ಶಿವಾಜಿ ಎಂಬು ದನ್ನು ಅರಿತಿದ್ದ ರಾಮದಾಸರು, ಅವನಿಗೆ ದೂರ ವಾಗಿಯೇ ನಡೆಯತೊಡಗಿದರು. ಒಂದು ದಿನ ಭಿಕ್ಷೆಗಾಗಿ ತನ್ನ ಮನೆಯ ಮುಂದೆ ನಿಂತ ರಾಮ ದಾಸರನ್ನು ನೋಡಿದ ಶಿವಾಜಿ, ತನ್ನ ರಾಜ್ಯ ವನ್ನೆಲ್ಲಾ ಆ ಸಾಧುಗಳಿಗೇ ಸಮರ್ಪಿಸಿ ಬರೆಯ ಲ್ಪಟ್ಟ ಮೀಲುನಾಮೆಯನ್ನು ಅವರ ಭಿಕ್ಷಾ ಪಾತ್ರದಲ್ಲಿ ಹಾಕಿದನು.

ಧರ್ಮಬದ್ಧವಾದ ಸಾಮ್ರಾಜ್ಯವನ್ನು ಉತ್ತಮ ರೀತಿಯಲ್ಲಿ ಪಾಲಿಸಿಕೊಂಡಿರುವಂತೆ ರಾಮದಾಸರು ಶಿವಾಜಿಗೆ ಆದೇಶ ಮಾಡಿದರು. ಆ ಮಹತ್ತರವಾದ ಕಾರ್ಯದಲ್ಲಿಯೇ ಶಿವಾಜಿ ನಿಮಗ್ನನಾದನು. ಹಿಂದೂ ದೇವಾಲಯಗಳ ನಿರ್ಮಾಣಗಳಿಗೆ ಮಾತ್ರವಲ್ಲದೆ, ಮಸೀದಿಗಳ ನಿರ್ಮಾಣಗಳಿಗೂ ಶಿವಾಜಿ ಸಹಾಯ ಮಾಡಿದನು. ಅವನಿಗೆ ಮತ ವಿರೋಧವಿರಲಿಲ್ಲ. ಆದರೆ ಔರಂಗಜೇಬನ ಮತ ದುರಭಿಮಾನವನ್ನು ಮಾತ್ರ ಇದಿರಿಸಿ ಹೋರಾಡಿದನು.





ಸಾಹಸ ವೀರನೂ, ಮಹಾ ನಾಯಕನೂ ಆದ ಶಿವಾಜಿ ತನ್ನ ಐವತ್ತಮೂರನೇ ವಯಸ್ಸಿನಲ್ಲೇ (೧೬೮೦ ನೇ ವರ್ಷ) ಕಣ್ಣು ಮುಚ್ಚಿದನು. ಅವನ ಮರಣವು ಮಹಾರಾಷ್ಟ್ರರಿಗೆ ಮಾತ್ರವಲ್ಲದೆ ಔರಂಗಜೇಬನ ಹಿಂಸೆಗಳನ್ನು ಅನುಭವಿಸುತ್ತಿರುವವರೆಲ್ಲರಿಗೂ ವಿಷಾದವನ್ನು ಉಂಟುಮಾಡಿತು.

ಶಿವಾಜಿಯ ತರುವಾಯ ಅವನ ಕುಮಾರ ಶಂಭೂಜೀ ರಾಜನಾದನು. ಅಚಂಚಲವಾದ ಧೈರ್ಯ ಸಾಹಸಗಳಿಂದ ಶಂಭೂಜೀ ಒಂಬತ್ತು ವರ್ಷ ಮೊಗಲರ ಉಪಟಳದಿಂದ ರಾಜ್ಯವನ್ನು ಕಾಪಾಡಿದನು. ಆಗಾಗ ನಡೆಯುವ ಯುದ್ಧಗಳಲ್ಲಿ, ಮೊಗಲ್ ಸೇನೆಗಳಿಗೆ ಸ್ವಯಂ ಔರಂಗಜೇಬನೇ ನಾಯಕತ್ವ ವಹಿಸಿ ಬಂದಾಗಲೂ, ಮಹಾರಾಷ್ಟ್ರರು ಶಂಭೂಜೀಯ ನಾಯಕತ್ವದಲ್ಲಿ ಒಮ್ಮನಸ್ಸಿನ ಒಗ್ಗಟ್ಟಿನಲ್ಲಿ ಹೋರಾಡಿದುದರಿಂದ ಜಯಿಸಲಾಗದೆ ಹೋದನು.





ಒಂದು ದಿನ ಶಂಭೂಜೀ ನಿದ್ದೆಯಲ್ಲಿರುವ ಸಮಯ ಸಾಧಿಸಿ, ಮೊಗಲ್ ಸೇನೆಗಳು ಅವನನ್ನು ಹಿಡಿದುಬಿಟ್ಟವು. ೧೬೮೯ ನೇ ವರ್ಷದಲ್ಲಿ, ಶಂಭೂಜೀ ಬಂದೀಯಾಗಿದ್ದೂ ಸಹ, ಔರಂಗಜೇಬನ ದುಷ್ಕೃತ್ಯಗಳನ್ನು ತೀವ್ರವಾಗಿ ಖಂಡಿಸಿದನು. ಔರಂಗಜೇಬನು ಶಂಭೂಜೀಯನ್ನು ದಾರುಣವಾದ ಚಿತ್ರಹಿಂಸೆಗಳಿಂದ ಕೊಲ್ಲಿಸಿದನು.

ಶಂಭೂಜೀಯ ಹತ್ಯದಿಂದ ಮಹಾರಾಷ್ಟ್ರದಲ್ಲಿ ಕ್ರೋಧವೂ, ಹಟವೂ ಕೆರಳಿಕೊಂಡಿತು. ಗೆರಿಲ್ಲಾ ಯುದ್ಧ ಪದ್ಧತಿಯನ್ನು ಅವಲಂಬಿಸಿ, ಸಂಧಿ ದೊರೆತಲ್ಲೆಲ್ಲಾ ಮೊಗಲ್ ಸೇನೆಗಳನ್ನು ಹತ ಮಾಡಲು ತೊಡಗಿದರು. ಔರಂಗಜೇಬನು ಮಹಾರಾಷ್ಟ್ರರ ಅಧಿಕಾರವನ್ನು ಕೊನೆಮುಟ್ಟಿಸಲು ಶತ ಪ್ರಯತ್ನ ಮಾಡಿದರೂ, ಅವನ ಬಲವೇ ದಿನದಿಂದ ದಿನಕ್ಕೆ ಇಳಿಯುತ್ತಾ ಹೋಯಿತು.





ಶಿವಾಜಿಯ ಎರಡನೇ ಕುಮಾರ ರಾಜಾರಾಮ್ ಮಹಾರಾಷ್ಟ್ರರಿಗೆ ನಾಯಕತ್ವವಹಿಸಿ ಮೊದಲು ಜಿಂಗಿ ಕೋಟೆಯಲ್ಲಿ, ಆಮೇಲೆ ಸತಾರಾ ಕೋಟೆಯಲ್ಲಿ ಹೀಗೆ ೧೭೦೦ ನೇ ವರ್ಷದಲ್ಲಿ ಅವನು ಸಾಯುವವರೆಗೂ ಹೋರಾಟ ಸಾಗಿಸಿದನು, ರಾಜಾರಾಮ್‌ನ ಅನಂತರ ಅವನ ಪತ್ನಿ ತಾರಾಬಾಯಿ ನಾಯಕಿಯಾಗಿ ಸಮರ್ಥತೆಯಿಂದ ಸೇನೆಗಳನ್ನು ನಡೆಸಿದುದರಿಂದ, ಔರಂಗಜೇಬನಿಗೆ ಶಾಂತಿ ಇಲ್ಲದೆ ಹೋಯಿತು.




# ಕತ್ತೆಯ ಖರೀದಿ

ಅನೇಕ ವರ್ಷಗಳ ಹಿಂದೆ ಕೈರೋ ನಗರದಲ್ಲಿ ಬಡ್ಡೀ ಲೇವಾದೇವಿ ನಡೆಸುವ ಧನವಂತನೊಬ್ಬನಿದ್ದನು. ಅವನು ಧನವಿದ್ದಷ್ಟೇ ಹೆಚ್ಚು ಧನದ ಆಶೆಯೂ ಉಳ್ಳವನು. ತನ್ನ ಹತ್ತಿರ ಸಾಲ ಕೇಳಲು ಬರುವವರ ಅಗತ್ಯಗಳನ್ನು ಹಿಡಿದು ದೊಡ್ಡ ದೊಡ್ಡ ಸಂಖ್ಯೆಗಳಲ್ಲಿ ಬಡ್ಡಿ ವಸೂಲು ಮಾಡಿಕೊಳ್ಳುವನು. ಹೀಗೆ ಹಣ ಪಡೆಯುವ ಸಹಾಯ ಬೇಕಾದುದರಿಂದ, ಜನರೆಲ್ಲರೂ ಅವನ ಮುಂದೆ ಬಾಗುವರು.

ಆದರಿಂದ ತನಗಿರುವಷ್ಟು ಬುದ್ಧಿವಂತಿಕೆ ಬೇರೆ ಯಾರಿಗೂ ಇಲ್ಲವೆಂದು ಅವನಿಗೆ ಅಹಂಕಾರವೂ ಬಂದಿತ್ತು. ಮಾತಾಡುವಾಗ ಅದೊಂದು ಒಳ್ಳೆಯ ಹೆಮ್ಮೆ ಎಂದುಕೊಂಡು, "ನನ್ನನ್ನು ಮೋಸಪಡಿಸಲಿಕ್ಕೆ ಯಾರಿಗೂ ಸಾಧ್ಯವಿಲ್ಲ" ಅನ್ನುವನು.

ಒಂದು ಸಾರಿ ನಗರದೊಳಗಿನ ನಾಲ್ವರು ಯುವಕರು ಆ ಬಡ್ಡೀ ವ್ಯಾಪಾರಿಯ ಸಂಗತಿಯನ್ನು ತಿಳಿದು, ಅವನ ಹೆಮ್ಮೆ ಪೂರ್ತಿ ಒಣಗಿ ಹೋಗುವ ಹಾಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿಕೊಂಡರು. ಅವರಲ್ಲಿ ಒಬ್ಬನು ಒಂದು ಕತ್ತೆಯ ಮೇಲೆ ಕುಳಿತುಕೊಂಡು ಬಡ್ಡೀ ವ್ಯಾಪಾರಿಯ ಹತ್ತಿರ ಹೋಗಿ, "ಅಯ್ಯಾ, ನನ್ನ ಹತ್ತಿರವಿರುವ ಐದು ದೀನಾರಗಳಿಗೆ ಚಿಲ್ಲರೆ ಬೇಕಿತ್ತು. ಕೊಡುವಿರಾ?" ಎಂದು ಕೇಳಿದನು.

"ಧೇಷಾಗಿ ಕೊಡುತ್ತೇನೆ. ಅದಕ್ಕೆ ರುಸುಮು ಸ್ವಲ್ಪ ಕೊಡಬೇಕಾಗುತ್ತದೆ" ಎಂದು ಬಡ್ಡೀ ವ್ಯಾಪಾರಿ ಚಿಲ್ಲರೆ ನಾಣ್ಯಗಳನ್ನು ಎಣಿಸಿ ಒಂದೊಂದು ದೀನಾರವಾಗಿ ಪೇರಿಸಿಡತೊಡಗಿದನು.

ಆಗ ಅಲ್ಲಿಗೆ ಉಳಿದ ಮೂವರು ಯುವಕರೂ ಬಂದು, ಥಕ್ಕನೆ ನಿಂತು, ಕತ್ತೆಯನ್ನು ಪರೀಕ್ಷಿಸಿ ನೋಡಿದರು. ಆಮೇಲೆ ಅವರಲ್ಲೊಬ್ಬನು ರಹಸ್ಯ ಹೇಳುವವನಂತೆ, ಮೆಲುದನಿಯಿಂದ, "ಆ, ಇದೇ, ಇದೇ ಆ ಕತ್ತೆ! ಸಂದೇಹವೇ ಇಲ್ಲ" ಎಂದನು.

"ನಿಜಕ್ಕೂ ಇದೇ ಏನು?" ಎಂದನು ಇನ್ನೊಬ್ಬ ಉತ್ಸಾಹದಿಂದ.

"ಏನೋ, ನನಗೆ ನಂಬುಗೆಯಾಗುವುದಿಲ್ಲಪ್ಪ" ಎಂದನು ಮೂರನೆಯವನು.

"ನೀನು ಸುಮ್ಮನಿರು. ಇದೇ ನಮಗೆ ಬೇಕಾದ ಕತ್ತೆ. ಎಷ್ಟು ಬೆಲೆ ಹೇಳುತ್ತಾನೋ? ಕೇಳಿ ನೋಡು." ಎಂದರು ಇಬ್ಬರೂ ಮೂರನೆಯವನೊಂದಿಗೆ.

ಈಜಿಪ್ಟ್ ಜಾನಪದ ಕಥೆ



ಕಡೆಗೆ ಮೂವರು ಯುವಕರೂ ಸ್ವಲ್ಪ ಕೋಪ ದಿಂದ, "ಸುಮ್ಮನೆ ಹೊತ್ತು ಕಳೆಯಬೇಡಯ್ಯ. ಸಾವಿರ ದೀನಾರಗಳನ್ನು ಕೊಡುತ್ತೇವೆ. ಸರಿತಾನೆ ?" ಎಂದು ಕೇಳಿದರು.

ಕತ್ತೆಯ ಯಜಮಾನನಂತೆ ನಟಿಸುವ ಅವರ ಮಿತ್ರನು ಕೋಪದ ಕಣ್ಣುಗಳಿಂದ ಆ ಮೂವರನ್ನು ನೋಡಿದನು.

ಬಡ್ಡೀ ವ್ಯಾಪಾರಿ ತನ್ನ ಕಿವಿಗಳನ್ನು ತಾನೇ ನಂಬ ಲಾಗದೆ ಹೋದನು. ಅವನು ಆತುರತೆಯಿಂದ ಆ ಯುವಕರೊಂದಿಗೆ, "ಅಲ್ಲಾ, ನಿಮಗೆ ಅಷ್ಟೊಂದು ಕತ್ತೆಯ ಅಗತ್ಯವಿದ್ದರೆ ಒಂದಲ್ಲ, ಎರಡು ಕತ್ತೆ ಗಳನ್ನು ನಾನು ಮಾರುತ್ತೇನೆ. ಒಂದೊಂದಕ್ಕೆ ಸಾವಿರ ದೀನಾರಗಳು. ಏನೆನ್ನುವಿರಿ ? ತರಿಸಲೇ ನನ್ನ ಕತ್ತೆಗಳನ್ನು ?" ಎಂದನು.

ಯುವಕರು ಬಡ್ಡೀ ವ್ಯಾಪಾರಿಯ ಮಾತಿಗೆ ನಗಾಡಿ, ಕತ್ತೆಯ ಯುವಕನನ್ನು ನೋಡಿ, "ಹೌದಯ್ಯ! ಎರಡು ಸಾವಿರ ದೀನಾರಗಳು ! ನಿನ್ನ ಈ ಕತ್ತೆಗೆ ಇದು ಕೂಡಾ ನ್ಯಾಯವಾದ ಬೆಲೆ ಅಲ್ಲವೆನ್ನು ವೆಯಾ ?" ಎಂದರು ಅಂಗಲಾಚುವ ಹಾಗೆ.

"ನಿಜವಾಗಿಯೂ ನೀವು ಈ ಕತ್ತೆಯನ್ನು ಕೊಂಡು ಕೊಳ್ಳುವಿರಾದರೆ ಹತ್ತು ಸಾವಿರ ದೀನಾರ ಕೊಡಿರಿ. ಇದು ತುಂಬಾ ಲಾಭಕಾರಿಯಾದ ವ್ಯಾಪಾರವೆಂದು ನಿಮಗೆ ತಿಳಿಯದ್ದೇನಲ್ಲ" ಎಂದನು ಕತ್ತೆಯ ಯಜಮಾನ.

"ಅಷ್ಟು ಹಣ ನಮ್ಮ ಹತ್ತಿರ ಇಲ್ಲವಲ್ಲಾ. ನಿನ್ನದು ವಿಪರೀತ ದುಬಾರಿಯ ಬೆಲೆಯಾಯಿತು, ಹೆಚ್ಚು ಮಾತು ಬೇಡ. ಐದು ಸಾವಿರ ತೆಗೆದುಕೋ. ಕೊಟ್ಟುಬಿಡು" ಎಂದರು ಮೂವರು ಯುವಕರು.

"ಒಂದೇ ಮಾತು. ಹತ್ತು ಸಾವಿರಕ್ಕೆ ಚಿಕ್ಕಾಸು ಕಡಿಮೆಯಾದರೂ ಕೊಡಲಾರೆ" ಎಂದನು ಕತ್ತೆಯ ಯಜಮಾನ.

ಆ ಮೂವರೂ ಕತ್ತೆಯ ಮೇಲೆ ಕುಳಿತು ಬಂದವನ ಹತ್ತಿರ ಹೋಗಿ, "ಏನಯ್ಯಾ, ನಿನ್ನ ಈ ಕತ್ತೆಯನ್ನು ನಾವು ಕೊಂಡುಕೊಳ್ಳಬೇಕೆಂದಿದ್ದೇವೆ. ಎಷ್ಟು ಬೆಲೆ ಹೇಳುತ್ತೀ ?" ಎಂದು ಕೇಳಿದರು.

"ಮಾರುವುದೆ ? ಈ ಕತ್ತೆಯನ್ನೆ ? ನಾನಿದನ್ನು ಮಾರುವೆನೆಂದು ನಿಮಗೆ ಯಾರು ಹೇಳಿದರು ?" ಎಂದನು ಕತ್ತೆಯ ಯಜಮಾನ ಆಶ್ಚರ್ಯ ನಟಿಸುತ್ತ.

"ನೀನು ತಪ್ಪದೆ ಈ ಕತ್ತೆಯನ್ನು ನಮಗೆ ಮಾರಲೇ ಬೇಕು. ಇಷ್ಟರವರೆಗೆ ಮಾರುವ ಆಲೋಚನೆ ಮಾಡದಿದ್ದರೇನಾಯಿತು ? ಸ್ವಲ್ಪ ಹೆಚ್ಚಿಗೇ ಹಣ, ನೂರು ದೀನಾರಾ ತೆಗೆದುಕೋ, ಕೊಟ್ಟುಬಿಡು ಕತ್ತೆ ಯನ್ನು" ಎಂದು ಮೂವರೂ ಒತ್ತಾಯಪಡಿಸಿದರು.

ಈ ಸಂಭಾಷಣೆಯನ್ನು ಕೇಳಿದ ಬಡ್ಡೀ ವ್ಯಾಪಾರಿ ಆಶ್ಚರ್ಯಾತಿಶಯದಿಂದ ನಿರ್ವಿಣ್ಣನಾದನು. ಎಷ್ಟೇ ಬಲವೂ, ಪ್ರಾಯವೂ ಇದ್ದ ಕತ್ತೆಯಾದರೂ, ಕತ್ತೆಯ ಬೆಲೆ ಹತ್ತು ದೀನಾರಗಳನ್ನು ಮೀರದು.

"ಇಷ್ಟೊಂದು ಮೊಂಡು ಪಟ್ಟು ಒಳ್ಳೆಯದಲ್ಲ" ಎಂದನು ಮೂವರಲ್ಲೊಬ್ಬ.

"ನನ್ನನ್ನು ಮೊಂಡು ಹಟವೆನ್ನಲು ನಿನಗೇನು ಅಧಿಕಾರವಿದೆ ? ನನ್ನ ಕತ್ತೆಗೆ ನಾನು ಹೇಳುವ ಬೆಲೆ ಇಷ್ಟವಿದ್ದರೆ ಕೊಡಿ. ಇಲ್ಲವೇ ಮಾತಾಡದೆ ಹೋಗಿರಿ!" ಎಂದನು ಕತ್ತೆಯ ಯಜಮಾನ ಕೋಪದಿಂದ.

"ಹೋಗು ಎಂದು ಅವಮರ್ಯಾದೆ ಮಾಡುವಿಯಾ ?" ಎಂದು ಮುಂತಾಗಿ ಮಾತು ಬೆಳೆದು ಸ್ವಲ್ಪ ಹೊತ್ತು ಕಲಹಿಸಿಕೊಂಡರು. ಕಡೆಗೆ ಕತ್ತೆಯ ಯಜಮಾನನಾದ ಯುವಕನು ಮೂವರು ಯುವಕರೊಂದಿಗೆ, "ನಿಮ್ಮ ರೀತಿ ನೀತಿ ನನಗೇನೂ ಹಿಡಿಸಲಿಲ್ಲ. ನೀವು ಹತ್ತು ಸಾವಿರ ದೀನಾರ ಕೊಟ್ಟರೂ ನಿಮಗೆ ನನ್ನ ಕತ್ತೆಯನ್ನು ಮಾರುವುದೇ ಇಲ್ಲ. ಹೋಗಿರಿ" ಎಂದನು.

ಅವರು ಮೂವರೂ ಅಲ್ಲಿಂದ ಹೋಗಿ ಬೀದಿಯ ಬದಿಯಲ್ಲಿದ್ದ ಒಂದು ಮರದ ಕೆಳಗಿನ ನೆರಳಿನಲ್ಲಿ ಕುಳಿತುಕೊಂಡರು.

ಬಡ್ಡೀ ವ್ಯಾಪಾರಿ ಕತ್ತೆಯ ಯಜಮಾನನೊಂದಿಗೆ, "ಒಬ್ಬನು ಸಾಧಾರಣ ಕತ್ತೆಗೆ ಐದು ಸಾವಿರ ಬೆಲೆ ಕಟ್ಟುವುದು ಕನಸಿನಲ್ಲಿಯೂ ನಡೆಯದ ಸಂಗತಿ. ನನ್ನ ಮಾತು ಕೇಳಿ ಮಾರಿಬಿಡು" ಎಂದನು.

"ಅಯ್ಯಾ, ನನ್ನ ಈ ಕತ್ತೆಯಲ್ಲಿರುವ ನಿಗೂಢ ರಹಸ್ಯ ನಿಮಗೇನು ಗೊತ್ತು ? ಅದಕ್ಕಿರುವ ಅದ್ಭುತ ಶಕ್ತಿ ಹೇಳುತ್ತೇನೆ ಕೇಳಿ. ಮಧ್ಯ ರಾತ್ರಿಯ ಹೊತ್ತಿನಲ್ಲಿ ಈ ಕತ್ತೆಯನ್ನು ಬಿಟ್ಟರೆ ಭೂಮಿಯಡಿಯಲ್ಲಿ ಎಲ್ಲೆಲ್ಲಿ ನಿಧಿ ನಿಕ್ಷೇಪವಿದೆಯೆಂದು ಕಾಲಿನಿಂದ ಕೆದರಿ ಕೆದರಿ ತೋರಿಸುತ್ತದೆ" ಎಂದನು ಮೆಲ್ದನಿಯಿಂದ ಕತ್ತೆಯ ಯುವಕ.

ತರುವಾಯ ಅವನು ದೀನಾರಗಳಿಗೆ ಚಿಲ್ಲರೆ ಪಡೆದು, ತನ್ನ ಕತ್ತೆಯೊಂದಿಗೆ ಸಮೀಪದಲ್ಲಿದ್ದ ಒಂದು ಪಾನೀಯದ ಅಂಗಡಿಗೆ ಹೋಗಿ ಕುಳಿತನು.



ಮರದ ಕೆಳಗೆ ಕುಳಿತಿದ್ದ ಮೂವರು ಯುವಕರೂ ಬಡ್ಡೀ ವ್ಯಾಪಾರಿಯ ಹತ್ತಿರ ಬಂದು. "ಅಯ್ಯಾ, ಆ ಕತ್ತೆಯವನಿಗೆ ಕೋಪ ಬಂದ ಹಾಗಿದೆ. ಅವನು ಕತ್ತೆಯನ್ನು ನಮಗೆ ಮಾರುವುದೇ ಇಲ್ಲ ಅಂದು ಬಿಟ್ಟ. ನಮಗಾಗಿ ನೀವೇ ಕೊಂಡುಕೊಂಡು ನಮಗೆ ಕೊಡಿ. ಹತ್ತು ಸಾವಿರ ದೀನಾರಗಳನ್ನೇ ತೆಗೆದುಕೊಳ್ಳುವಂತೆ ಹೇಳಿ. ನಿಮಗೆ ಪ್ರತಿಫಲವಾಗಿ ನೂರು ದೀನಾರ ರುಸುಮು ಕೊಡುತ್ತೇವೆ" ಎಂದರು.

"ನೂರೆ ? ಯಾವ ಮೂಲೆಗೆ ?" ಎಂದನು ಬಡ್ಡೀ ವ್ಯಾಪಾರಿ ತಲೆ ಕೊಡರಿಕೊಂಡು.

"ಹಾಗಾದರೆ ಇನ್ನೂರು ತೆಗೆದುಕೊಳ್ಳಿ. ಅವನು ಹೊರಟು ಹೋಗುವುದಕ್ಕೆ ಮೊದಲೇ ತೆಗೆದುಕೊಳ್ಳಿ ಸ್ವಾಮೀ" ಎಂದು ಮೂವರು ಯುವಕರೂ ಬಡ್ಡೀ ವ್ಯಾಪಾರಿಯನ್ನು ಅಂಗಲಾಚಿದರು.

ಬಡ್ಡೀ ವ್ಯಾಪಾರಿ ಕತ್ತೆಯ ಯಜಮಾನನ ಬಳಿಗೆ ಹೋಗಿ, ಹತ್ತು ಸಾವಿರ ದೀನಾರಗಳಿಗೆ ಕತ್ತೆಯನ್ನು

ತನಗೆ ಮಾರುವಂತೆ ಕೇಳಿದನು. ಯುವಕನು ಅದಕ್ಕೆ ಒಪ್ಪಿದನು. ವ್ಯಾಪಾರಿ ಹತ್ತು ಸಾವಿರ ದೀನಾರಗಳನ್ನು ತಂದು ಅವನಿಗೆ ಕೊಟ್ಟು, ಕತ್ತಿಯನ್ನು ಕೊಂಡುಕೊಂಡನು.

ಅವನು ಮೂವರು ಯುವಕರ ಬಳಿಗೆ ಬಂದು, "ನಿಮಗೆ ಈ ಕತ್ತಿ ಬೇಕಾಗಿದ್ದರೆ ಇಪ್ಪತ್ತು ಸಾವಿರ ದೀನಾರಗಳನ್ನು ನನಗೆ ಕೊಡಬೇಕು. ಅದು ನಿಮಗೆ ಇಷ್ಟವಿಲ್ಲದಿದ್ದರೆ ಕತ್ತಿಯನ್ನು ನಾನೇ ಇಟ್ಟುಕೊಳ್ಳುತ್ತೇನೆ" ಎಂದನು.

ಮೂವರು ಯುವಕರೂ ಕತ್ತಿಯನ್ನು ಪರೀಕ್ಷಿಸಿ ನೋಡಿ, "ಇದು ನಾವು ಇಷ್ಟು ಹೊತ್ತಿನವರೆಗೆ ಕೊಂಡುಕೊಳ್ಳಬೇಕೆಂದಿದ್ದ ಕತ್ತಿಯೇ ಏನು ? ಅನುಮಾನವಾಗಿದೆಯಲ್ಲಾ ! ನೀವೇ ಇಟ್ಟುಕೊಳ್ಳಿರಿ ! ಅಲ್ಲದೆ ಇಪ್ಪತ್ತು ಸಾವಿರ ನಾವೆಲ್ಲಿಂದ ತರುವುದು?" ಎನ್ನುತ್ತ ಅವರು ಅಲ್ಲಿಂದ ಹೊರಟು ಹೋಗತೊಡಗಿದರು.

ಬಡ್ಡೀ ವ್ಯಾಪಾರಿ ಕೋಪದಿಂದ, "ನಿಲ್ಲಿರಿ ! ನಾನು ಅವನಿಗೆ ಕೊಟ್ಟ ಹತ್ತು ಸಾವಿರದೊಂದಿಗೆ ಇನ್ನೂರು ದೀನಾರಾ ರುಸುಮೂ ಸೇರಿಸಿ ಕೊಟ್ಟು ಈ ಕತ್ತಿಯನ್ನು ಕೊಂಡೊಯ್ಯಿರಿ !" ಎಂದನು,

"ಇಪ್ಪತ್ತು ಸಾವಿರವೆಂದು ಈಗ ಹತ್ತೆನ್ನುವಿರಾ? ಹೇಳಿಬಿಟ್ಟೆವಲ್ಲ, ನೀವೇ ಇಟ್ಟುಕೊಳ್ಳೀ ಅಂತ ?" ಎಂದರು ಯುವಕರು ಮೂವರೂ ನಿರ್ಲಕ್ಷ್ಯವಾಗಿ ಅವರ ಪಾಡಿಗೆ ಬೇಗಬೇಗನೆ ಹೋಗುತ್ತಾ.

ಬಡ್ಡೀ ವ್ಯಾಪಾರಿ ದೊಡ್ಡ ಕಂಠದಿಂದ "ಅಯ್ಯಾ ! ದೊಡ್ಡ ಮನುಷ್ಯರೆಲ್ಲಾ ಬನ್ನಿರೋ ! ನಿಲ್ಲಿರೋ !" ಎಂದು ಕೂಗಿದನು.

ಪೇಟೆಯ ಬೀದಿಯಲ್ಲಿ ಹೋಗುವ ಹತ್ತು ಮಂದಿ ಅವನ ಸುತ್ತಲೂ ಸೇರಿ, ಸಂಗತಿ ಏನೆಂದು ಕೇಳಿದರು,

ಬಡ್ಡೀ ವ್ಯಾಪಾರಿ ಅವರಿಗೆ ಮೂವರು ಯುವಕರನ್ನು ತೋರಿಸಿ, "ಅವರು ಕೊಂಡುಕೊಳ್ಳುವಂತೆ ಹೇಳಿದ ಈ ಕತ್ತಿಯನ್ನು ಹತ್ತು ಸಾವಿರ ದೀನಾರಾ ಕೊಟ್ಟು ಕೊಂಡುಕೊಂಡೆ. ಈಗ ಅವರು ಇದನ್ನು ನನಗೇ ಬಿಟ್ಟು ಹೋಗುತ್ತಿದ್ದಾರೆ. ಇಂಥಾ ಅನ್ಯಾಯ ಎಲ್ಲಾದ್ದರೂ ಉಂಟೇ ?" ಎಂದನು.

"ಹತ್ತು ಸಾವಿರ ದೀನಾರಾ ಕೊಟ್ಟು ಕತ್ತಿಯನ್ನು ಕೊಳ್ಳುವುದೇ ? ಎಲ್ಲಾದರೂ ಉಂಟೇ ? ನೀವು ಅಷ್ಟು ಹುಚ್ಚರೋ !" ಎಂದು ಜನರಲ್ಲಿ ಒಬ್ಬನು ಹೇಳಲು, ಎಲ್ಲರೂ ನಕ್ಕರು.

ನಿಜವಾಗಿಯೂ ಪಾಪ, ಬಡ್ಡೀ ವ್ಯಾಪಾರಿಗೆ ಆದ ನಷ್ಟ ಎಷ್ಟೆಂದರೆ, ಒಂಬತ್ತು ಸಾವಿರದ ಒಂಬೈನೂರ ತೊಂಬತ್ತೈದು ದೀನಾರಗಳು. ಅವನು ಕೊಂಡುಕೊಂಡ ಆ ಕತ್ತಿಯ ಬೆಲೆ ಐದು ದೀನಾರಗಳಿಗಿಂತ ಹೆಚ್ಚೇನೂ ಇರದು !





# ರಾಕ್ಷಸಿಯಿಂದಾದ ಮೇಲು

ಅನೇಕ ವರ್ಷಗಳ ಹಿಂದೆ ನಾಣೂರಿನಲ್ಲಿ ವೀರಣ್ಣನೆಂಬ ಯುವಕನೊಬ್ಬನಿದ್ದನು. ಅವನು ಬಹಳ ಸಾಧು ಗುಣದವನಾಗಿದ್ದನು. ಆದರೆ ಬುದ್ಧಿವಂತನು ಹೌದೋ ಅಲ್ಲವೋ ಗೊತ್ತಾಗುವಂತೆ ಅವನ ಚಟುವಟಿಕೆಗಳೇನೂ ಇರಲಿಲ್ಲ. ಅವನದು ಉದಾಸೀನದಿಂದ ಮುರಗಟ್ಟಿ ಹೋದಂತಹ ಮೈಕಟ್ಟು. ಅವನಿಗೆ ದೊಡ್ಡ ಆಸ್ತಿಪಾಸ್ತಿಗಳೇನಿಲ್ಲದೆ, ತಂದೆ ಬಿಟ್ಟುಹೋದ ಹುಲ್ಲು ಛಾವಣಿಯ ಮನೆಯೂ ಮನೆಯ ಸುತ್ತಲಿನ ಖಾಲಿ ಜಾಗವೂ ಮಾತ್ರವೇ ಇದ್ದುವು. ತಾಯಿಯೊಬ್ಬಳು ಅವನಿಗೆ ಹೇಗೋ ಬೇಯಿಸಿ ಹಾಕಿ ಬೆಳೆಸಿದ್ದಳು. ವರದಕ್ಷಿಣೆಯೋ ನಗನಟ್ಟುಗಳೋ ಕೊಡಲು ಸಾಧ್ಯವಿಲ್ಲದ ಬಡವನೊಬ್ಬನು ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದ್ದನು. ಆ ಹುಡುಗಿಯ ಹೆಸರು ಮೈಥಿಲಿ. ಅವಳು ಕೆಲಸಗಳನ್ನೆಲ್ಲಾ ಮಾಡುವ ಚುರುಕು ಹುಡುಗಿ.

ಮೈಥಿಲಿ ಮನೆಗೆ ಬಂದ ಮೇಲೆ ಗಂಡನ ಸೋಮಾರಿತನವನ್ನು ಮನವರಿಕೆ ಮಾಡಿಕೊಂಡಳು. ಅದನ್ನು ಓಡಿಸಬೇಕೆಂಬ ಪ್ರಯತ್ನಗಳಿಗೆ ತೊಡಗಿದಳು. ಆದರೆ ವೀರಣ್ಣನಲ್ಲಿ ಯಾವ ಬದಲಾವಣೆಯೂ ಕಾಣಲಿಲ್ಲ. ಆದರೂ ಅವಳು ಪಟ್ಟು ಬಿಡದೆ, ಮನೆಯ ಸುತ್ತಲಿರುವ ಖಾಲೀ ಜಾಗದಲ್ಲಿ ಬಾಳೆಗಳನ್ನೂ ತೆಂಗಿನ ಸಸಿಗಳನ್ನೂ ನೆಟ್ಟಳು. ಉಳಿದ ಜಾಗದಲ್ಲಿ ತರಕಾರಿಗಳನ್ನೂ ಬೆಳೆಸತೊಡಗಿದಳು. ಅವಳ ಶ್ರಮಫಲಿಸ ತೊಡಗಿತು.

ಬಾಳೆಗಿಡ ಬೆಳೆದು ಗೊನೆಬಿಡಲು ಪ್ರಾರಂಭಿಸಿದ ಮೇಲೆ, ಅವುಗಳನ್ನು ಎತ್ತಿಕೊಂಡು ಹೋಗಿ ಪೇಟೆಯಲ್ಲಿ ಮಾರಿ ಬರುವ ಕೆಲಸ ವೀರಣ್ಣನ ಮೇಲೆ ಬಿತ್ತು. ಅವನು ಆ ಕೆಲಸ ಮಾಡದೆ ಉಪಾಯವಿಲ್ಲದಾಯಿತು.

ಇಷ್ಟವಿಲ್ಲದೆಯೇ ಹೆಂಡತಿಯ ತೃಪ್ತಿಗಾಗಿ ವೀರಣ್ಣನು ಬಾಳೇಕಾಯಿ ವ್ಯಾಪಾರಕ್ಕಾಗಿ ಪಟ್ಟಣಕ್ಕೆ ಹೊರಟನು. ಅವನು ಬಾಳೆಗೊನೆಯನ್ನು ಹೆಗಲಲ್ಲಿಟ್ಟುಕೊಂಡು ಮನೆಯಿಂದ ಹೊರಟ ಕೂಡಲೇ ಮೈಥಿಲಿ ಹಿಂದಿನಿಂದ "ಎಚ್ಚರದಲ್ಲಿ ಹೋಗಿ. ದಾರಿಯಲ್ಲಿ ಕಾಡಿನ ಯಾವ ಮರದ ಬುಡದಲ್ಲಿಯಾದರೂ ಮಲಗಿ ನಿದ್ದೆಗಿದ್ದೆ ಮಾಡಿಬಿಡಬೇಡಿ. ಬೇಗಬೇಗ ನಡೆದು ಕತ್ತಲೆಯಾಗುವ ಮೊದಲೇ ಭದ್ರವಾಗಿ ಮನೆಗೆ ಬಂದುಬಿಡಿ. ಹಣದ ವಿಷಯ ಜಾಗ್ರತೆ !" ಎಂದು ಎಚ್ಚರಿಕೆ ಬೇರೆ ಕೊಟ್ಟಳು.

ಎಂ. ಕೆ. ಈಶ್ವರ ರಾವ್



ವೀರಣ್ಣನು ಪಟ್ಟಣದಲ್ಲಿ ಬಾಳೆಕಾಯಿಗಳನ್ನು ಬುದ್ಧಿವಂತಿಕೆಯಿಂದ ಬೇಗನೇ ಮಾರಿ ಮುಗಿಸಿದನು. ಮನೆಗೆ ಹಿಂದಿರುಗುವಾಗ ಬಂದ ಹಣದಲ್ಲಿ ಪಾವಲಿ ಖರ್ಚು ಮಾಡಿ ಮಿಠಾಯಿ ತಿಂದನು. ಉಳಿದ ಹಣವನ್ನು ಎಣಿಸಿ ವಸ್ತ್ರದ ಕೊನೆಯಲ್ಲಿ ಕಟ್ಟಿಕೊಳ್ಳುವಾಗ, ಅವನಿಗೆ ಮೈಥಿಲಿಯ ಜ್ಞಾಪಕ ಬಂತು. ಅವಳು ಈ ನಡುವೆ ಕೆಲವು ದಿನಗಳಿಂದ ಒಡೆದ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿದ್ದಳು. ಅವಳಿಗಾಗಿ ಒಂದು ಕನ್ನಡಿ ಕೊಂಡುಕೊಳ್ಳಬೇಕೆಂದು ವೀರಣ್ಣನಿಗೆ ತೋರಿತು.

ಅವನು ಎರಡು ರೂಪಾಯಿ ಬೆಲೆಯ ಒಂದು ಕನ್ನಡಿಯನ್ನು ಕೊಂಡುಕೊಂಡು, ಮನೆಗೆ ಹೊರಟನು. ಅವನ ಊರನ್ನು ಸೇರಲು ಎರಡು ದಾರಿಗಳಿದ್ದವು. ಒಂದು ಸುತ್ತು ದಾರಿಯಾಗಿದ್ದು ಸ್ವಲ್ಪ ದೂರವಾದುದು. ಇನ್ನೊಂದು ಹತ್ತಿರದ ಒಳದಾರಿಯಂತಹುದು. ಈ ದಾರಿಯಲ್ಲಿ ಹೋದರೆ ಒಂದು ಕಾಲುವೆ ಈಜಿ ಆಚೆಯ ದಂಡೆಗೆ ಹೋಗಿ ಕಾಡಿನೊಳಗೆ ಸ್ವಲ್ಪ ನಡೆಯಬೇಕು. ಬೇಗ ಮನೆ ಸೇರಬೇಕೆಂಬ ಆತುರದಲ್ಲಿ ವೀರಣ್ಣನು ಹತ್ತಿರದ ದಾರಿಯನ್ನೇ ಹಿಡಿದು, ಕಾಲುವೆಯಲ್ಲಿ ಈಜಿ ಆಚೆಗೆ ಹೋದನು.

ಅಷ್ಟು ಹೊತ್ತಿಗೆ ಮಧ್ಯಾಹ್ನ ತಿರುಗಿದರೂ ಸೂರ್ಯನ ಬಿಸಿಲು ಜೋರಾಗಿಯೇ ಕಾಯುತ್ತಿತ್ತು. ದಾರಿಯ ಬದಿಯಲ್ಲಿ ಒಂದು ದೊಡ್ಡ ಹುಣಿಸೇ ಮರದ ನೆರಳನ್ನು ನೋಡಿದಾಗ ವೀರಣ್ಣನಿಗೆ ಥಕ್ಕನೆ ಉದಾಸೀನತೆ ಬಂದು ಬಿಟ್ಟಿತು. ಅವನು ಆ ಹುಣಿಸೇ ಮರದ ಬುಡಕ್ಕೆ ಹೋಗಿ ಕನ್ನಡಿಯನ್ನು ಪಕ್ಕದಲ್ಲಿಟ್ಟುಕೊಂಡು ಮಲಗಿ ನಿದ್ದೆಗೆ ಜಾರಿದನು.

ಆ ಮರಟ ಮೇಲೆ ಒಬ್ಬಳು ಬ್ರಹ್ಮರಾಕ್ಷಸಿ ವಾಸವಾಗಿದ್ದಳು. ಆ ಸಮಯದಲ್ಲಿ ಅವಳಿಗೂ ನಿದ್ದೆ ಬಂದಿತ್ತು. ಸ್ವಲ್ಪ ಹೊತ್ತಿಗೆ ಬಿಸಿಲು ಕೆಳಗೆ ಮಲಗಿದ್ದ ವೀರಣ್ಣನ ಮೇಲೂ, ಅವನು ಕೊಂಡುಕೊಂಡಿದ್ದ ಕನ್ನಡಿಯ ಮೇಲೂ ಬಿದ್ದಿತು. ಕನ್ನಡಿಯ ಮೇಲೆ ಬಿದ್ದ ಬಿಸಿಲಿನ ಬಿಂಬದ ಪ್ರಕಾಶ, ಮರದ ಕೊಂಬೆಯಲ್ಲಿ ನಿದ್ರಿಸಿಕೊಂಡಿದ್ದ ಬ್ರಹ್ಮರಾಕ್ಷಸಿಯ ಮುಖದ ಮೇಲೆ ಬಿತ್ತು. ಅದು ಬಿಸಿಯಾಗಿ ತಗಲಿದುದರಿಂದ ಅವಳಿಗೆ ನಿದ್ರಾಭಂಗವಾಯಿತು. ಸುತ್ತುಮುತ್ತು ಮೇಲೆ ಕೆಳಗೆ ನೋಡಿದಳು.

ಬ್ರಹ್ಮರಾಕ್ಷಸಿ ಕೋಪದಿಂದ ಕಣ್ಣು ತೆರೆದು ಮರದ ಕೆಳಗೆ ಮಲಗಿರುವ ವೀರಣ್ಣನನ್ನು ನೋಡಿ, "ಯಾವನೋ ಇವನು! ನನ್ನ ಮರದ ಕೆಳಗೆ ಬಂದು ಸೇರಬೇಕಾದರೆ ಏನಿವನ ಧೈರ್ಯ!" ಎಂದುಕೊಂಡು, "ಓಯ್" ಎಂದು ಆರ್ಭಟಿಸುತ್ತ ಕೆಳಗೆ ಧುಮುಕಿದಳು.

ವೀರಣ್ಣನು ಮೆಟ್ಟಿಬಿದ್ದೆದ್ದು ಕುಳಿತನು. ತನ್ನ ಇದಿರಿನಲ್ಲಿ ದೊಡ್ಡ ದೊಡ್ಡ ಜಡೆಗಳಿಂದ, ಭಯಂಕರವಾದ ಕೋರೆ ಹಲ್ಲುಗಳಿಂದ, ಗುಂಡಗಾಗಿರುವ ಬ್ರಹ್ಮ

ರಾಕ್ಷಸಿಯನ್ನು ನೋಡಿ, ದೊಡ್ಡ ಭಯದಿಂದ ಕನ್ನಡಿಯನ್ನು ಮುಖಕ್ಕೆ ಅಡ್ಡವಿಟ್ಟುಕೊಂಡನು. ಆಗ ಕನ್ನಡಿಯ ಬೆನ್ನು ಅವನ ಮುಖದ ಕಡೆಗಾಗಿತ್ತು.

ಬ್ರಹ್ಮರಾಕ್ಷಸಿಗೆ ಕನ್ನಡಿಯಲ್ಲಿ ತನ್ನ ಮುಖವು ಕಂಡ ಕೂಡಲೇ, ಮರದ ಕೆಳಗಿರುವುದು ಇನ್ನೊಂದು ಬ್ರಹ್ಮರಾಕ್ಷಸಿಯೇ ಎಂದು ತೋರಿತು. ಅವಳು ಆಶ್ಚರ್ಯದಿಂದ ಚಪ್ಪಾಳೆ ತಟ್ಟಿ, " ಅರರೇ, ಅದ್ಭುತ! ಅತ್ಯದ್ಭುತ ! ಮನುಷ್ಯನ ಶರೀರ ! ಬ್ರಹ್ಮರಾಕ್ಷಸಿಯ ತಲೆ ! ನೀನು ನನ್ನಂಥ ಬ್ರಹ್ಮರಾಕ್ಷಸಿಯೇ ಆದರೂ ಇಷ್ಟು ದೊಡ್ಡ ವಿಚಿತ್ರ ವಿದ್ಯೆ ಎಲ್ಲಿಂದ ಕಲಿತಿಯೇ ? " ಎಂದು ವೀರಣ್ಣನನ್ನು ಕೇಳಿದಳು.

ಈ ಪ್ರಶ್ನೆ ಕೇಳಿ ವೀರಣ್ಣನ ಭಯವು ಹಾರಿ ಹೋಗಿ, ಅಲ್ಲಿ ಆಶ್ಚರ್ಯವು ಕವಿಯಿತು. ಅದರೊಂದಿಗೇ ಅವನ ಬುದ್ಧಿಗೆ ಚೇತರಿಕೆ ಬಂದಿತು. ಮುಖಕ್ಕೆ ಅಡ್ಡವಿಟ್ಟುಕೊಂಡಿದ್ದ ಕನ್ನಡಿಯನ್ನು ಬದಿಗೆ ಸರಿಸಿಕೊಂಡನು.

ಆಗ ಬ್ರಹ್ಮರಾಕ್ಷಸಿ ಇಮ್ಮಡಿ ಆಶ್ಚರ್ಯಪಡುತ್ತ, " ಅರರೇ ! ಈಗ ನಿನ್ನ ಮುಖ ಅಚ್ಚ ಮನುಷ್ಯನ ಹಾಗೆಯೇ ಮಾರ್ಪಟ್ಟಿತಲ್ಲಾ ! ಈ ಕ್ಷಣದಲ್ಲೇ ನೀನು ಮನುಷ್ಯರ ಮಧ್ಯದಲ್ಲಿ ಕಾಲ ಕಳೆಯಬಹುದು. ಸಾಕ್ಷಾತ್ ಗಂಡು ಮನುಷ್ಯನಾದಿ. ಬ್ರಹ್ಮರಾಕ್ಷಸಿ ಎಂದು ನಿನ್ನನ್ನು ಯಾರೂ ಹೇಳಲಿಕ್ಕಿಲ್ಲ. ಏನೇ, ನನಗೂ ಈ ವಿದ್ಯೆ ಕಲಿಸುವಿಯಾ ? ನನಗೂ ಮನುಷ್ಯರ ನಡುವೆ ತಿರುಗಬೇಕೆಂದು ಬಹಳ ಆಸೆಯಾಗಿದೆ " ಎಂದಳು.

ಈ ಪ್ರಶ್ನೆ ಕೇಳಿದ ಕೂಡಲೇ ವೀರಣ್ಣನ ಬುದ್ಧಿಗೆ ಒಂದು ಆಲೋಚನೆ ಬಂತು. ಇಷ್ಟು ಕಾಲ ತನ್ನನ್ನು ಎಲ್ಲರೂ ಜಡ ಸೋಮಾರಿ ಎಂದು ಹೀಯಾಳಿಸಿಕೊಂಡಿದ್ದರು. ತಾನು ಬ್ರಹ್ಮರಾಕ್ಷಸಿಗೆ ಮನುಷ್ಯರೂಪ ಕೊಡಲಾಗದೆ ಹೋದರೂ, ಅವಳ ಕ್ರೂರ ಸ್ವಭಾವವನ್ನು ಮಾರ್ಪಡಿಸಿ ಮನುಷ್ಯರ ಮಧ್ಯಕ್ಕೆ ಕರೆದು



ಕೊಂಡು ಹೋದರೆ ಎಲ್ಲರೂ ನನ್ನನ್ನು ಅದ್ಭುತ ಕಾರ್ಯ ಮಾಡಿದೆನೆಂದು ಕೀರ್ತಿಸುತ್ತಾರೆ.

ವೀರಣ್ಣನು ಹೀಗೆ ಆಲೋಚಿಸಿ ಬ್ರಹ್ಮರಾಕ್ಷಸಿಯೊಂದಿಗೆ, " ನಿನ್ನನ್ನು ತಪ್ಪದೆ ನನ್ನ ಹಾಗೇ ಮಾರ್ಪಡಿಸಿಬಿಡುತ್ತೇನೆ, ಅದಕ್ಕೆ ಮೊದಲು ನೀನು ಮನುಷ್ಯರ ಅಭ್ಯಾಸಗಳನ್ನೆಲ್ಲಾ ಕಲಿಯಬೇಕು. ಕ್ರೂರ ಸ್ವಭಾವ ಬಿಟ್ಟು ಸಾಧುವಾಗಿ ವರ್ತಿಸಲೇ ಬೇಕು. ಆಗ ನನ್ನ ಹಾಗೇ ನಿನಗೆ ಮನುಷ್ಯ ರೂಪ ಬಂದುಬಿಡುತ್ತದೆ. ಅವಸರಪಟ್ಟರೆ ಕಾರ್ಯ ಕೆಡುತ್ತದೆ, ಆಗಬಹುದಾದರೆ ಹೇಳು " ಎಂದನು.

" ಚೆನ್ನಾಗಿದೆ. ಹಾಗೇ ಆಗಲಿ. ನೀನು ಹೇಳಿದ ಹಾಗೇ ನಡೆದುಕೊಳ್ಳುತ್ತೇನೆ " ಎಂದು ಬ್ರಹ್ಮರಾಕ್ಷಸಿ ಉತ್ಸಾಹದಿಂದ ಹೇಳಿದಳು.

ವೀರಣ್ಣನು ಅದಕ್ಕೆ ಮನುಷ್ಯರ ನಡುವಿನಲ್ಲಿರುವ ಪರಸ್ಪರ ಬಾಂಧವ್ಯ, ಮರ್ಯಾದೆ, ಮಾತಾಡಿಸುವ ರೀತಿ, ಮೊದಲಾದುವನ್ನು ಕುರಿತು ಸ್ವಲ್ಪ ಹೊತ್ತು

ಹೇಳಿದನು. ಹೊತ್ತು ಮುಳುಗಿ ಕತ್ತಲೆಯಾಗುವಾಗ, "ನಾಳೆ ಕತ್ತಲೆಯಾದ ಮೇಲೆ ಇಲ್ಲಿಗೆ ಬರುತ್ತೇನೆ. ನಿನ್ನನ್ನು ಪೂರ್ತಿ ಮನುಷ್ಯ ಮಾಡಲು ಆರು ತಿಂಗಳು ಹಿಡಿಯಬಹುದು" ಎಂದನು.

ಅಲ್ಲಿಂದ ಅವನು ಮನೆಗೆ ಬಂದು ಸೇರುವಾಗ ಚೆನ್ನಾಗಿ ಕತ್ತಲಾಯಿತು. ಆದ್ದರಿಂದ ಕೋಪದಲ್ಲಿ ಗಂಡನ ದಾರೀ ಇದಿರು ನೋಡಿಕೊಂಡಿದ್ದ ಮೈಥಿಲಿ "ಈಗಾದರೂ ಬಂದಿರಲ್ಲ! ಒಬ್ಬಳು ಹೆಂಡತಿ ಇರುವಳೆಂಬ ನೆನಪೇ ಬೇಡವೇನು? ನಾನೆಷ್ಟು ಗಾಬರಿ ಯಾದೆನೆಂದು ನಿಮಗೇನಾದರೂ ಗೊತ್ತಿದೆಯೇ?" ಎಂದಳು.

ಬ್ರಹ್ಮರಾಕ್ಷಸಿಯ ಸಮಾಚಾರ ಹೇಳಿದರೆ ಅವಳು ಹೆದರಿ ಕೈ ಕಾಲುಗೆಡುವಳೆಂದುಕೊಂಡು ವೀರಣ್ಣನು ಅದನ್ನು ಹೇಳದೆ, "ಸುತ್ತಿ ಬಳಸಿ ಅಷ್ಟು ದೂರ ದಿಂದ ಬರಬೇಡವೇ?" ಎಂದು ಹೇಳಿ, ತಾನು ತಂದ ಕನ್ನಡಿಯನ್ನು ಅವಳಿಗೆ ಕೊಟ್ಟನು. ಅದನ್ನು ನೋಡಿ ಅವಳ ಮುಖ ಸಂತೋಷದಿಂದ ಇಷ್ಟಗಲವಾಯಿತು.

ಮರುದಿನ ಕತ್ತಲಾದ ವೇಳೆಯಲ್ಲಿ ವೀರಣ್ಣನು. ಈಗಲೇ ಬರುತ್ತೇನೆಂದು ಮೈಥಿಲಿಗೆ ಹೇಳಿ ಮನೆ ಯಿಂದ ಹೊರಟನು. ಜಡಸೋಮಾರಿಕೆಯಲ್ಲಿರುವು ದನ್ನು ಮೆಚ್ಚುವ ತನ್ನ ಗಂಡ, ಈ ಹೊತ್ತಿನಲ್ಲಿ ಎಲ್ಲಿಗೆ ಹೋಗುವನೋ ಎಂದು ಮೈಥಿಲಿಗೆ ಆಶ್ಚರ್ಯ ವಾಯಿತು.

ಆ ದಿನ ರಾತ್ರಿ ವೀರಣ್ಣನು ಬ್ರಹ್ಮರಾಕ್ಷಸಿಗೆ ಮನುಷ್ಯರ ಆಚಾರ, ಅಲಂಕಾರಗಳನ್ನು ಕುರಿತು ಹೇಳಿದನು. ಅವನು ಹೇಳುವುದನ್ನು ಬ್ರಹ್ಮರಾಕ್ಷಸಿ ಶ್ರದ್ಧೆಯಿಂದ ಹೂಂಗುರು ಗುಟ್ಟಿಕೊಂಡು ಕೇಳು ತ್ತಿದ್ದಳು. ರಾತ್ರಿ ಬಹಳ ಹೊತ್ತಾಗಿ ಮನೆಗೆ ಹಿಂದಿರುಗಿದ ಕೂಡಲೇ ಮೈಥಿಲಿ "ಇಷ್ಟು ಹೊತ್ತು ಎಲ್ಲಿದ್ದಿರಿ? ಏನು ಅಂತಹ ಕೆಲಸ ಮಾಡಿದಿರಿ?" ಎಂದು ಕೇಳಿದಳು.

ವೀರಣ್ಣನು ಉಸ್ಸೆನ್ನುತ್ತಾ, "ಜಡತನದಿಂದ ದಡ್ಡು ಗಟ್ಟಿದ ಶರೀರಕ್ಕೆ ಚುರುಕುಬರಲೆಂದು ಸ್ವಲ್ಪ ದೂರ ನಡೆದಾಡಿ ಬಂದೆ" ಎಂದು ಹೇಳಿ ಮಲಗಿದನು.



ಮರುದಿನ ಕತ್ತಲಾದ ಮೇಲೆ ಕೂಡಾ ಅವನು ಮನೆಯಿಂದ ಹೊರಟು ಕಾಡಿನ ಕಡೆ ಹೋದನು. ಆಗ ಬ್ರಹ್ಮರಾಕ್ಷಸಿಯಲ್ಲಿ ಬಹಳ ಮಾರ್ಪಾಟು ಬಂದಿತ್ತು. ಅವಳು ಮನುಷ್ಯರ ಅಲಂಕಾರಗಳನ್ನು ಕೇಳಿದುದರಿಂದ ತನ್ನ ಉದ್ದುದ್ದದ ಉಗುರುಗಳನ್ನೆಲ್ಲ ಕತ್ತರಿಸಿಕೊಂಡಿದ್ದಳು. ಆಮೇಲೆ ಕಾಲುವೆಯಲ್ಲಿ ಸ್ನಾನ ಮಾಡಿ ಏನೇನೋ ಕಾಡು ಹೂಗಳನ್ನು ತಲೆಗೆ ತುರುಕಿಕೊಂಡಿದ್ದಳು.

ವೀರಣ್ಣನು ಅವಳನ್ನು ಮೆಚ್ಚಿಕೊಳ್ಳುತ್ತ "ನಾನು ಹೇಳಿದ್ದು ನಿನಗೆ ಅರ್ಥವಾಗಿದೆ. ಗಂಡಿಗಿಂತ ಹೆಣ್ಣಾಗಿದ್ದರೇ ಚೆಂದ. ನಾನೊಬ್ಬಳೇ ಗಂಡಾದದ್ದು ಸಾಕು. ಹೆಚ್ಚು ಅಲಂಕಾರ ಮಾಡಿಕೊಳ್ಳಲಿಕ್ಕೆ ಮಾನವನಿಗಿಂತ ಮಾನವಿಗೇ ಅವಕಾಶ ಹೆಚ್ಚು" ಎಂದು ಪುಸಲಾಯಿಸಿ, ಮನುಷ್ಯರಲ್ಲಿ ಗಂಡು ಹೆಣ್ಣುಗಳ ಸಂಬಂಧವನ್ನು ಕುರಿತು ಸ್ವಲ್ಪ ಹೊತ್ತು ವಿವರಿಸಿ ಹೇಳಿದನು. ಆ ದಿನ ರಾತ್ರಿ ವೀರಣ್ಣನು ಮನೆಗೆ ಬಂದ ಕೂಡಲೇ ಮೈಥಿಲಿ, "ದಿನಾ ರಾತ್ರೀ ಹೊತ್ತಿನಲ್ಲಿ ಎಲ್ಲಿಗೆ ತಾನೇ ಹೋಗುವಿರೋ ? ನಿಮ್ಮ ಉದಾಸೀನ ಬಿಟ್ಟು ಹೋಗುವುದೇನೋ ಒಳ್ಳೆದೇ ನಿಜ. ಅದಕ್ಕೆ ಮನೇ ಹತ್ತಿರ ತೋಟದ ಕೆಲಸ ಅದೂ ಇದೂ ಬೇಕಾದಷ್ಟಿರುವಾಗ, ರಾತ್ರಿಯಲ್ಲಿ ಎಲ್ಲಿಗೆ ಹೋಗುವುದೆಂದು ನನ್ನ ಹತ್ತಿರ ಏಕೆ ಹೇಳುವುದಿಲ್ಲ ?" ಎಂದಳು ಕೋಪದಿಂದ.

"ನನಗೆ ರಾತ್ರಿ ನಡೆಯುವುದೇ ಸೊಗಸಾಗಿ ಕಾಣುತ್ತದೆ. ಹಗಲೆಲ್ಲಾ ಬಿಸಿಲು, ಬೆವರು!" ಎಂದು ಸುಮ್ಮನಾದನು. ಮೈಥಿಲಿ ಮತ್ತೆ ಮತ್ತೆ ಕೆದರಿ ಕೇಳಲು ಸಣ್ಣ ಜಗಳವೇ ಆಯಿತು. ಆದರೂ ಬ್ರಹ್ಮರಾಕ್ಷಸಿಯನ್ನು ಪೂರ್ತಿ ಸಾಧು ಮಾಡಿ ಗ್ರಾಮಕ್ಕೆ ಕರೆದುಕೊಂಡು ಬಂದು, ಎಲ್ಲರ ಇದಿರಿನಲ್ಲಿ ತಾನು ಹೇಳಿದ ಹಾಗೆ ಅವಳಿಂದ ಮಾಡಿಸಿ, ದೊಡ್ಡ ಹೆಸರು ಪಡೆಯಬೇಕೆಂದಿದ್ದ ವೀರಣ್ಣನು ರಾತ್ರಿಯಲ್ಲಿ ಹೋಗುವುದನ್ನು ಬಿಡಲಿಲ್ಲ.

ಒಂದು ದಿನ ರಾತ್ರಿ ಬ್ರಹ್ಮರಾಕ್ಷಸಿ ಅವನೊಂದಿಗೆ, "ನೀನು ನನಗಾಗಿ ಬಹಳ ಶ್ರಮಪಡುತ್ತಿರುವೆ,





ಮನುಷ್ಯನಾಗಿ ಹಣದ ಆಗತ್ಯ ತುಂಬಾ ಇದೆಯೆಂದೆಯಲ್ಲ ? ಒಂದು ಕಡೆಯಲ್ಲಿ ತುಂಬಾ ಹಣ ಹುಗಿದಿಟ್ಟದ್ದು ತಂದುಕೊಡುತ್ತೇನೆ. ಅದರ ವಿಷಯದ ಪಾಠ ಕೂಡಾ ನನಗೆ ಹೇಳು" ಎಂದಿತು.

ಆ ಮಾತು ಕೇಳಿ ವೀರಣ್ಣನಿಗೆ ಸಂತೋಷವಾಯಿತು. ಅದರ ಮರುದಿನ ರಾತ್ರಿ ತನ್ನ ಗಂಡನು ಹೀಗೆ ದಿನಾ ಎಲ್ಲಿಗೆ ಹೋಗುವನೆಂದು ತಿಳಿದುಕೊಳ್ಳುವ ಹಟದಿಂದ, ಕೆಟ್ಟ ಸಂದೇಹಕ್ಕೊಳಗಾಗಿ, ಮೈಥಿಲಿ ಹುಣಿಸೇ ಅಡರಿನ ಪೊರಕೆಯನ್ನು ತಯಾರಿಸಿಕೊಂಡು ಅವನ ಹಿಂದೆಯೇ ಹೊರಟಳು. ವೀರಣ್ಣನು ಬ್ರಹ್ಮರಾಕ್ಷಸಿಯ ಬಳಿಗೆ ನಿರ್ಭಯವಾಗಿ ಹೋಗುವುದನ್ನು ನೋಡಿ, ತುಂಬ ಹೆದರಿ ಒಂದು ಪೊದರಿನ ಹಿಂದೆ ಅಡಗಿ ಕುಳಿತಳು.

ಬ್ರಹ್ಮರಾಕ್ಷಸಿ ವೀರಣ್ಣನೊಂದಿಗೆ, "ನೀನು ನನಗೆ ಮನುಷ್ಯರ ಅನೇಕ ಅಭ್ಯಾಸಗಳನ್ನು ಹೇಳಿಕೊಟ್ಟೆ. ನಾನು ನೆಲದಡಿಯ ಹಣ ಎಬ್ಬಿಸಿ ತರುವುದಕ್ಕೆ ಹೋದಾಗ ಒಬ್ಬ ಮನುಷ್ಯ ಹಾಡುತ್ತಾ ಅಲ್ಲಿ ಕುಳಿತಿದ್ದ, ಚೆನ್ನಾಗಿತ್ತು. ಇವತ್ತು ನನಗೊಂದು ಹಾಡು ಕಲಿಸು" ಎಂದಿತು.

ವೀರಣ್ಣನು ತನಗೆ ಬರುವ ಒಂದು ಹಾಡನ್ನು ಗಟ್ಟಿಯಾಗಿ ಹಾಡ ತೊಡಗಿದನು. ಬ್ರಹ್ಮರಾಕ್ಷಸಿ ಅವನನ್ನು ಅನುಕರಿಸಿ ಹಾಡಲು ತೊಡಗಿದಳು.

ಇಷ್ಟು ತಿಳಿದ ಮೇಲೆ ಬ್ರಹ್ಮರಾಕ್ಷಸಿಯ ವಿಕಾರವಾದ ರೂಪ ನೋಡಿ ಹೆದರಿದ ಮೈಥಿಲಿಯ ಭಯ ಹಾರಿ ಹೋಯಿತು. ಅವಳು ಹುಣಿಸೇ ಪೊರಕೆಯನ್ನು ನೆಗಹಿಕೊಂಡು ಪೊದರಿನ ಮರೆಯಿಂದ ಎದ್ದು ಬರುತ್ತಾ, "ಇಷ್ಟು ದಿನ ನೀವು ಮಾಡುವ ಘನ ಕಾರ್ಯ ಇದೇ ಏನು ? ನಿಜವಾಗಿಯೂ ನಿಮಗೆ ಉದಾಸೀನ ಹೋಯಿತೆಂದುಕೊಂಡೆ. ಮೊದಲು ನಿಮ್ಮ ರಾತ್ರಿಯ ಶಿಷ್ಯಳಿಗೆ ಬುದ್ಧಿಕಲಿಸಬೇಕು, ಹಾಳು ಸ್ವರವೋ ತಾಳೆಯೋಲೆಯ ಬರ್ಬರ ಶಬ್ದವೋ ! ಇವಳ ಸುರೂಪಕ್ಕೆ ಹಾಡು ಬೇರೆ !" ಎನ್ನುತ್ತ ಹುಣಿಸೇ ಪೊರಕೆಯಿಂದ ಬ್ರಹ್ಮರಾಕ್ಷಸಿಯನ್ನು ಹೊಡೆಯ ತೊಡಗಿದಳು.

ಬ್ರಹ್ಮರಾಕ್ಷಸಿ ಇನ್ನಷ್ಟು ಕರ್ಕಶವಾಗಿ ಕೂಗುತ್ತ ಕಿರಿಚುತ್ತ "ಕಾಪಾಡ್ರೋ ! ಇದಾವುದೋ ಬ್ರಹ್ಮರಾಕ್ಷಸಿ ಬಂತಲ್ಲೋ !" ಎಂದು ಅಲ್ಲಿಂದ ಓಡಿ ಹೋಗತೊಡಗಿದಳು.

ವೀರಣ್ಣನಿಗೂ ಆ ಕ್ಷಣಗಳಲ್ಲಿ ಹೆಂಡತಿಯನ್ನು ನೋಡಿ ಭಯವಾಯಿತು. ಅವನೂ ಬ್ರಹ್ಮರಾಕ್ಷಸಿಯ ಹಿಂದೆಯೇ ಅರಣ್ಯಕ್ಕೆ ಓಡಿದನು. ಸ್ವಲ್ಪ ದೂರ ಓಡಿದ ಮೇಲೆ ಬ್ರಹ್ಮರಾಕ್ಷಸಿ ಆಯಾಸ ಪಡುತ್ತ ಕುಳಿತು, ವೀರಣ್ಣನನ್ನು ನೋಡಿ, "ನನ್ನ ಹಿಂದೆ ಏಕೆ ಬಂದೇ ?" ಎಂದು ಕೇಳಿದಳು.

"ನಿನಗೆ ಮನುಷ್ಯರನ್ನು ಕುರಿತು ಎಷ್ಟೋ ವಿಷಯ ಬೋಧಿಸಿದೆನಷ್ಟೇ ? ಹಣದ ವಿಷಯವನ್ನೂ ಕಲಿಸುವಾ ಅಂತಲೇ ಬಂದೆ. ಎಲ್ಲಿಯೋ ಧನವಿದೆ

ಅಂದೆಯಲ್ಲಾ ? ಅದನ್ನಷ್ಟು ಬೇಗನೇ ತಂದುಬಿಡು. ಬೇಗ ಕಲಿಸಿಬಿಡುತ್ತೇನೆ " ಎಂದನು.

ಬ್ರಹ್ಮರಾಕ್ಷಸಿ ಎದ್ದುನಿಂತು, "ನೀನು ಈವರೆಗೆ ಹೇಳಿದ್ದೆಲ್ಲಾ ಆ ನರಬ್ರಹ್ಮರಾಕ್ಷಸಿಯ ಪೆಟ್ಟಿನಿಂದ ಮರೆತೇ ಹೋಯಿತು. ಮನುಷ್ಯರ ನಡುವೆ ಅಂಥಾ ಬ್ರಹ್ಮರಾಕ್ಷಸಿಯರೂ ಇರುವರೆಂದು ನೀನು ಹೇಳಲೇ ಇಲ್ಲ. ಬೇಡವೇ ಬೇಡ. ಮನುಷ್ಯರೇ ಬಾರದಂಥ ದಟ್ಟಗಿನ ಕಪ್ಪು ಕಾಡಿಗೇ ಹೋಗಿ ಬಿಡುತ್ತೇನೆ. ಇಷ್ಟವಿದ್ದರೆ ನೀನೂ ಈ ಮನುಷ್ಯ ರೂಪ ಬಿಟ್ಟು ನನ್ನೊಂದಿಗೆ ಬಾ !" ಎಂದು ಹೇಳಿ ಹಿಂದಿರುಗಿ ನೋಡದೆ ವೇಗವಾಗಿ ಹೊರಟುಹೋದಳು.

ತನ್ನ ಉಪಾಯವೆಲ್ಲ ತಲೆಕೆಳಗಾಗಿ ಹೋದುದನ್ನು ನೋಡಿ ವೀರಣ್ಣನಿಗೆ ಬುದ್ಧಿ ಸತ್ತ ಹಾಗಾಯಿತು. ಬೆಳಗಾಗುವವರೆಗೂ ಅಲ್ಲೇ ಇರುವುದೋ, ಬೇಡವೋ ಎಂದು ಅವನು ಆಲೋಚಿಸಿಕೊಂಡಿರುವಾಗ, ಸಣ್ಣದೊಂದು ಕಟ್ಟಿಗೆ ಹೊರೆ ಹೊತ್ತುಕೊಂಡು ಮುದುಕ ಭದ್ರಪ್ಪ ಆ ದಾರಿಯಲ್ಲಿ ಬಂದು ವೀರಣ್ಣನನ್ನು ನೋಡಿ, "ಯಾರು ಉದಾಸೀನದ ವೀರಣ್ಣನಾ ? ಇಷ್ಟು ಹೊತ್ತಿಗೆ ಇಲ್ಲೇನು ಮಾಡುವಿ ? ನಾನು ನಡೆಯಲು ಕಷ್ಟವಾಗಿ ಬಹಳ ಹೊತ್ತು ಮಲಗಿಬಿಟ್ಟೆ, ನಿನಗೇನಾಯಿತು ಇಷ್ಟು ಹೊತ್ತಿಗೆ ?" ಎಂದು ಕೇಳಿದನು. ವೀರಣ್ಣನು ನಡೆದ ಸಂಗತಿಯನ್ನೆಲ್ಲಾ ಅವನೊಂದಿಗೆ ಹೇಳಿ, "ನೀವು ಹೇಳಿ ಭದ್ರಪ್ಪಾ. ಇದರಲ್ಲಿ ನಾನು ಮಾಡಿದ ತಪ್ಪೇನು ?" ಎಂದು ಕೇಳಿದನು.

"ನಿನ್ನೆ ಮೊನ್ನೆಯವರೆಗೂ ಉದಾಸೀನದ ಬದುಕು ಬದುಕಿದ್ದು ನಿನ್ನ ತಪ್ಪು. ಅದನ್ನು ಬಿಟ್ಟು, ಎಲ್ಲಿಯೋ ಇದ್ದ ಬ್ರಹ್ಮರಾಕ್ಷಸಿಯನ್ನು ಮನುಷ್ಯರ ನಡುವೆ ತರಲು ಪ್ರಯತ್ನಿಸಿದ್ದು ದೊಡ್ಡ ತಪ್ಪು. ಆದರೂ ನಿನ್ನನ್ನು ಹಿಡಿದ ಉದಾಸೀನದ ರಕ್ಕಸಿ ಬಿಟ್ಟು ಹೋಗಿದೆಯಷ್ಟೆ ? ಇನ್ನು ಮೇಲೆ ಅಂಥಾ ಹಣದಾಶೆಗೆ ಹೋಗದೆ, ಮೈ ಬಗ್ಗಿ ಕೆಲಸ ಮಾಡಿ ಹೆಂಡತಿಯೊಂದಿಗೆ ಚೆನ್ನಾಗಿರು" ಎಂದನು.

ಆ ಕ್ಷಣದಲ್ಲಿ ವೀರಣ್ಣನಿಗೆ ತನ್ನ ಹೆಂಡತಿ ಒಬ್ಬಳೇ ತೋಟಗಾರಿಕೆಗಾಗಿ ಎಷ್ಟೆಲ್ಲ ಕಷ್ಟಪಡುವಳೆಂಬುದು ಕಣ್ಣಿಗೆ ಕಟ್ಟಿದ ಹಾಗಾಯಿತು.

ಕೂಡಲೇ ಅವನು ಭದ್ರಪ್ಪನ ಕಟ್ಟಿಗೆಯ ಹೊರೆಯನ್ನು ಎತ್ತಿ ತನ್ನ ತಲೆಯಲ್ಲಿಟ್ಟುಕೊಂಡು, "ನೀವು ಹೇಳಿದ್ದು ನಿಜ ಭದ್ರಪ್ಪಾ. ಇನ್ನು ಈ ವೀರಣ್ಣನು ಎಷ್ಟು ಚುರುಕಿನ ಕೆಲಸಗಾರನಾಗುವನೆಂದು ನೀವೇ ನೋಡುವಿರಿ. ಇದು ಒಂದು ರೀತಿಯಲ್ಲಿ ಬ್ರಹ್ಮ ರಾಕ್ಷಸಿ ನನಗೆ ಮಾಡಿದ ಮೇಲು" ಎಂದನು.

ಸ್ವಲ್ಪ ಮುಂದೆ ನಡೆಯಲು ಮೈಥಿಲಿಯೂ ಅವರನ್ನು ಕೂಡಿದಳು. ಗಂಡನಿಗೆ ಒಳ್ಳೆಯ ಬುದ್ಧಿ ಬಂದುದನ್ನು ತಿಳಿದು ಅವಳಿಗೆ ಸಂತೋಷವಾಯಿತು.



# ಅದೊಂದು ದೊಡ್ಡ ವಿಶೇಷ

**ರ**ಚ್ಚೇಗಿರಿ ಗ್ರಾಮದ ಕೆಲವರು ಎಲ್ಲೆಲ್ಲೋ ಉದ್ಯೋಗಗಳನ್ನು ಮಾಡಿ ಪದವಿಯಿಂದ ನಿವೃತ್ತರಾದ ಮೇಲೆ, ಸ್ವಂತ ಗ್ರಾಮವನ್ನು ಸೇರಿದರು. ಅವರೆಲ್ಲ ಒಂದು ದಿನ ಸಾಯಂಕಾಲ, ಹೊತ್ತು ಕಳೆಯಲು ಹರಟೆಗಟ್ಟೆಯಲ್ಲಿ ಸೇರಿ ಲೋಕಾಭಿರಾಮವಾಗಿ ಮಾತಾಡುತ್ತಿರುವಾಗ, ಹತ್ತು ವಯಸ್ಸಿನ ಹುಡುಗನೊಬ್ಬ ಅಲ್ಲಿಗೆ ಬಂದು, ಒಬ್ಬ ವೃದ್ಧನ ಹತ್ತಿರ, "ತಾತಾ, ರಾತ್ರಿ ಏನು ಅಡಿಗೆ ಮಾಡಬೇಕು ಅಂತ ಅಪ್ಪಾ ಅಮ್ಮಾ ಇಬ್ಬರೂ ನಿಮ್ಮನ್ನು ಕೇಳಿಬಾ ಅಂದರು" ಎಂದನು.

ಅದನ್ನು ಕೇಳಿ ಆ ಹುಡುಗನ ತಾತ, ಮೀಸೆಯ ಮೇಲೆ ಬೆರಳಾಡಿಸುತ್ತಾ, "ನೋಡಿದಿರಾ ? ನನ್ನ ಕುಟುಂಬದಲ್ಲಿ ನನ್ನ ಮಗ ಸೊಸೆ, ಮೊಮ್ಮಗ ಕೂಡಾ ನನ್ನ ಮಾತನ್ನು ಎಳ್ಳಿನಷ್ಟೂ ದಾಟಲು ಸಾಧ್ಯವಿಲ್ಲ!" ಎಂದು ಹೇಳಿ, ಹುಡುಗನಿಗೆ ತಕ್ಕ ಉತ್ತರ ಕೊಟ್ಟು ಕಳುಹಿಸಿದನು.

ಅದನ್ನು ಕೇಳಿ ಉಳಿದ ವೃದ್ಧರು ಕೂಡಾ ಕುಟುಂಬದಲ್ಲಿ ತಮ್ಮ ಮಾತು ಎಷ್ಟರಮಟ್ಟಿಗೆ ಚಲಾವಣೆಯಾಗುತ್ತದೆಂಬುದನ್ನು ಒಬ್ಬರನ್ನು ಮೀರಿಸುವಂತೆ ಒಬ್ಬರು ಜಂಬ ಹೇಳಿಕೊಳ್ಳ ತೊಡಗಿದರು.

ಅದನ್ನೆಲ್ಲ ಕೇಳುತ್ತ ಮೌನವಾಗಿ ಕುಳಿತಿದ್ದ ವೃದ್ಧನೊಬ್ಬ, ಅಲ್ಲಿಂದೆದ್ದು ಹೊರಡಲು ನೋಡುವಾಗ ಉಳಿದವರು ಸುಮ್ಮನಿರದೆ, "ಏನಯ್ಯಾ, ನಿಮ್ಮ ಸಂಗತಿ ಹೇಳಲೇ ಇಲ್ಲ. ನಿಮ್ಮನೇಲಿ ನಿಮ್ಮ ಮಾತೇ ನಡೆಯುತ್ತೇನು ?" ಎಂದು ಕೇಳಿದರು.

"ಇಷ್ಟರವರೆಗೂ ನನ್ನ ಮಾತೇ ನಡೆಯುತ್ತದೆಂಬ ವಿಷಯ ಇಷ್ಟು ದೊಡ್ಡ ವಿಶೇಷವೆಂದು ನನಗೆ ಗೊತ್ತೇ ಇರಲಿಲ್ಲ!" ಎಂದು ಹೇಳಿ ಆ ವೃದ್ಧನು ಮನೆಯ ದಾರಿ ಹಿಡಿದನು.






ಪರಶುರಾಮನು ಕೊಟ್ಟ ಕೋದಂಡವನ್ನು ಶ್ರೀರಾಮನು ಹಿಡಿದೆತ್ತಿ ಹೆದೆಯೇರಿಸಿದಾಗ ಪರಶು ರಾಮನು ತಲೆದೂಗುತ್ತ, "ರಘುರಾಮಾ! ಇಂದಿನಿಂದ ನಾನು ಕ್ಷತ್ರಿಯರ ಮೇಲಿನ ಹಗೆಯನ್ನು ಬಿಟ್ಟು ಪ್ರಶಾಂತವಾಗಿ ತಪಸ್ಸು ಮಾಡುತ್ತಾ ಕಾಲ ಕಳೆಯುತ್ತೇನೆ. ನಾನು ಕೊಟ್ಟ ಕೋದಂಡವು ಇನ್ನು ನಿನ್ನದೇ. ನೀನು ಕೋದಂಡರಾಮನೆಂದು ಪ್ರಸಿದ್ಧನಾಗುವಿ" ಎಂದು ಹೇಳಿ, ಹೊರಟುಹೋದನು.

ರಾಮನು ಸೀತಾ ಸಮೇತನಾಗಿ ಅಯೋಧ್ಯೆಯನ್ನು ಪ್ರವೇಶಿಸಿದನು. ನೂತನ ವಧೂವರರ ಆಗಮನದಿಂದ ಅಯೋಧ್ಯಾ ನಗರವು ಪರ್ವದಿನಗಳಂತೆ ಸುಂದರ ವೈಭವಗಳಿಂದ ಮೆರೆಯುವ ನಗರವಾಯಿತು.

ಸೀತಾರಾಮರು ತಮ್ಮೊಳಗಿನ ಪರಸ್ಪರಾನುರಾಗದಿಂದ ಒಂದೇ ಒಂದು ಪರಿಪೂರ್ಣ ಸ್ವರೂಪರಾಗಿ, ಸುಖ ಸಾಮ್ರಾಜ್ಯವನ್ನು ಅಲಂಕರಿಸಿಕೊಂಡಿದ್ದರು.

ಹಾಗಿರಲು ಒಂದು ದಿನ ರಾಮನು "ಸೀತಾ, ಈ ರಾಜಪ್ರಾಸದವೆಂಬ ಆವರಣದಿಂದ ಸುತ್ತಲ್ಪಟ್ಟ ಪ್ರದೇಶಕ್ಕಿಂತಲೂ, ನಾವು ಸುಂದರ ವನಗಳಲ್ಲಿ ಇಚ್ಛಾನುಸಾರವಾಗಿ ವಿಹರಿಸಿಕೊಂಡಿದ್ದರೆ ಹೆಚ್ಚಿನ ಆನಂದವಾಗಿರುತ್ತದಲ್ಲವೆ? ಆಗ ನೀನು ಸಾಕ್ಷಾತ್ ವನಲಕ್ಷ್ಮಿಯಾಗಿ ಕಂಗೊಳಿಸುವಿ..." ಎಂದು ಹೇಳ ತೊಡಗಿದಾಗ, ಸೀತೆಯ ಗಲ್ಲಗಳು ರಂಗೇರಿ ಹೊಳೆದುವು.

ಅವರಿಗೆ ದಿನಗಳು ಮಧುರವಾಗಿ ಕಳೆಯುತ್ತಿದ್ದುವು. ಆದರೆ ಸದಾ ಎಚ್ಚರದಲ್ಲಿರುವ ಕಾಲನು ಅದನ್ನು ನೋಡಿ ಸುಮ್ಮನಿರಲಿಲ್ಲ. ದಶರಥನಿಗೆ ದುರ್ನಿಮಿತ್ತಗಳು ತೋರತೊಡಗಿದುವು. ಆಗಾಗ ಉಲ್ಕಾಪಾತಗಳಾಗುತ್ತಿದ್ದುವು. ದಶರಥನಿಗೆ ಮುನಿದಂಪತಿಗಳು ಕೊಟ್ಟ ಶಾಪವು ನೆನಪಾಗ ತೊಡಗಿತು. ಸುಮ್ಮನೆ ಪ್ರಾಣಭಯ ಕಾಡತೊಡಗಿತು. ಇನ್ನು ರಾಮನಿಗೆ ಪಟ್ಟಾಭಿಷೇಕ ಮಾಡುವುದೇ ಒಳ್ಳೆಯದೆಂದುಕೊಂಡು ವಸಿಷ್ಠನಿಂದ ಮುಹೂರ್ತವನ್ನಿಡಿಸಿದನು.

ಅಗ ಸತ್ಯಲೋಕದಲ್ಲಿ ಏನಾಯಿತೆಂದರೆ, ಬ್ರಹ್ಮನು ಚಿದಾನಂದ ಸ್ವರೂಪನಾಗಿ ಕಮಲಾಸನದ ಮೇಲೆ

೧೨. ಶ್ರೀರಾಮನ ವನವಾಸ



ಕುಳಿತಿರಲು, ಸರಸ್ವತಿ ವೀಣೆಯ ಮೇಲೆ ರಾಗಮಾಲಿಕೆಯನ್ನು ಆಲಾಪಿಸಿಕೊಂಡಿದ್ದಳು. ಅಂತಹ ಸಮಯದಲ್ಲಿ ನಾರದನು ಇತರ ದೇವತೆಗಳನ್ನೆಲ್ಲಾ ತನ್ನ ಹಿಂದಿಟ್ಟುಕೊಂಡು ಅಲ್ಲಿಗೆ ಬಂದು, "ಓ ಪಿತಾಮಹಾ! ರಾಮನಿಗೆ ಪಟ್ಟಾಭಿಷೇಕವಂತೆ. ಅವನು ಸಿಂಹಾಸನ ಏರಿ ಕುಳಿತು ಬಿಟ್ಟರೆ ರಾಕ್ಷಸ ನಿರ್ಮೂಲನವು ಹೇಗಾದೀತು? ಈ ದೇವತೆಗಳೆಲ್ಲಾ ತಳಮಳಿಸಿಕೊಂಡಿದ್ದಾರೆ. ನೋಡು! ನೋಡು!" ಎಂದನು.

ಬ್ರಹ್ಮನು ಸರಸ್ವತಿಯ ಮುಖವನ್ನು ನೋಡಿದನು. ಸರಸ್ವತಿ ಮಂದಹಾಸದಿಂದ "ನಡೆಯಬೇಕಾದುದು ನಡೆಯದೆ ಹೋಗದು. ನಾರದಾ! ನೀನು ತ್ರಿಕಾಲ ಜ್ಞಾನಿಯಲ್ಲವೇನು? ಅಗೋ ಅಲ್ಲಿ ನೋಡು! ನಿನ್ನ ಹಾರೈಕೆಯು ಫಲಿಸಲಾಗುವಂತಹ ಮಂಥರೆ ಕೈಕೇಯಿಯ ಮಂದಿರಕ್ಕೆ ಹೋಗುತ್ತಿರುವುದನ್ನು ನೋಡು. ರಾಕ್ಷಸ ಸಂಹಾರದ ದಾರಿ ಪ್ರಾರಂಭವಾಗಲಿದೆ! ನಿಮ್ಮೆಲ್ಲರ ಚಿಂತೆ ನೀಗಲಿದೆ" ಎಂದಳು.

ದೇವತೆಗಳೂ, ನಾರದನೂ ಕೆಳಗೆ ಭೂಮಿಯನ್ನು ನೋಡಿದರು. ಗೂನು ಹೇರಿಕೊಂಡಿದ್ದ ದಾಸಿ ಮಂಥರೆ ಏನೋ ಗೊಣಗಿಕೊಳ್ಳುತ್ತಾ ಹೋಗುತ್ತಿದ್ದಳು.

ಅದನ್ನು ನೋಡಿ ನಾರದನು ಸರಸ್ವತಿಯೊಂದಿಗೆ, "ಅಮ್ಮಾ ವಾಗ್ದೇವಿ! ಲೋಕಕಲ್ಯಾಣಾರ್ಥವಾಗಿ ಅವಳ ಬಾಯಿಯಿಂದ ಎಂತಹ ಮಾತುಗಳನ್ನು ಹೊರಡಿಸುವಿಯೋ? ಎಲ್ಲಾ ನಿನ್ನ ದಯೆ!" ಎಂದು ನಮಸ್ಕಾರ ಮಾಡಿ ಹಿಂದಿರುಗಿದನು. ಅವನ ಹಿಂದೆಯೇ ದೇವತೆಗಳೆಲ್ಲಾ ಹೊರಟುಹೋದರು.

ಗೂನಿ ಮಂಥರೆ ಕೈಕೇಯಿಯೊಂದಿಗೆ ಅಯೋಧ್ಯೆಗೆ ಬಂದಿದ್ದ ಅವಳ ಅಂತರಂಗಿಕ ದಾಸಿ. ಅವಳು ಆಗ ತಾನೇ ನಿದ್ದೆಯಿಂದೆದ್ದ ಕೈಕೇಯಿಯನ್ನು ಕನಿಕರದಿಂದ ನೋಡುತ್ತಾ ನಿಂತಳು.

"ಏನಿದು ಮಂಥರಾ, ಹಾಗೆ ದಿಗಿಲು ಬಡಿದು ನೋಡುತ್ತಿರುವೆಯಲ್ಲಾ?" ಎಂದು ಕೇಳಿದಳು ಕೈಕೇಯಿ.

"ಏನು ಹೇಳಲಿ ಅಮ್ಮಾ? ನಾಳೆ ರಾಮನಿಗೆ ಪಟ್ಟಾಭಿಷೇಕವಂತೆ!" ಎಂದಳು ಮಂಥರೆ.

ಕೂಡಲೇ ಕೈಕೆ ತನ್ನ ಕೊರಳಲ್ಲಿದ್ದ ಮುತ್ತಿನ ಹಾರವನ್ನು ತೆಗೆದು ಮಂಥರೆಯ ಕೊರಳಿಗೆ ಹಾಕಿ, "ಎಷ್ಟು ಒಳ್ಳೆಯ ವಾರ್ತೆ ಹೇಳಿದೆ! ನಿನ್ನ ನಾಲಗೆ ಸಿಹಿಯಾಗಿರಲಿ!" ಎಂದಳು ಆತ್ಮಾನಂದದಿಂದ.

ಮಂಥರೆ ತುಟಿಯನ್ನು ವಕ್ರಿಸಿಕೊಂಡು, "ಅಯ್ಯೋ! ಕೈಕೇಯಿ! ಎಷ್ಟೊಂದು ಅಮಾಯಕಳಮ್ಮಾ ನೀನು! ಪಾಪ! ಬರೀ ದಡ್ಡ ಹುಡುಗಿಯ ಬುದ್ಧಿ ಇನ್ನೂ!" ಎಂದಳು.

"ಏಕೆ? ಏನು ಹೇಳುವಿ ಮಂಥರೇ?" ಎಂದು ಕೇಳಿದಳು ಕೈಕೇಯಿ.

"ರಾಮನು ರಾಜನಾದರೆ ಆ ಕೌಸಲ್ಯೆಯ ಮುಂದೆ ನಾನೂ ನೀನೂ ಒಂದೇ ಬಗೆಯ ದಾಸಿಗಳು! ಚೆನ್ನಾಗಿ ಆಲೋಚನೆ ಮಾಡು. ತಡಮಾಡಲು ವೇಳೆ

ಯಿಲ್ಲ, ಕೋಪ ಗೃಹಕ್ಕೆ ಹೋಗು, ನಿನ್ನ ಹಕ್ಕಿನ ಎರಡು ವರಗಳನ್ನು ಈಗ ಕೇಳಿಕೋ. ಭರತನನ್ನು ಏಕೆ ಹೆತ್ತಿರುವಿ ? ರಾಮನ ಬೆನ್ನಿಗೆ ಛತ್ರಚಾಮರ ಗಳನ್ನು ಹಿಡಿಯಲಿಕ್ಕೇನಾ ?" ಎಂದು ಮಂಥರೆ ಕಾಯಿಸಿಡುವ ಹಾಗೆ ಹೇಳಿದಳು.

ಆಮೇಲೇನು ? ತನ್ನ ಎರಡು ವರಗಳು ಈಗ ಕೊಡಬೇಕೆಂದು ಕೈಕೇಯಿ ದಶರಥನನ್ನು ಕೇಳಿದಳು. "ಆದೇನು ಬೇಕೋ ಕೇಳಿಕೋ" ಎಂದನು ದಶರಥ.

"ಹದಿನಾಲ್ಕು ವರ್ಷ ರಾಮನು ವನವಾಸ ಮಾಡ ಬೇಕು. ಭರತನಿಗೆ ಪಟ್ಟಾಭಿಷೇಕವಾಗಬೇಕು" ಎಂಬ ವರಗಳನ್ನು ಕೇಳಿದಳು ಕೈಕೆ.



ಆ ಮಾತುಗಳನ್ನು ಕೇಳಿ ದಶರಥನು ದುಃಖಾ ವೇಗದಿಂದ ಮೂರ್ಛೆ ಹೋಗಿ ಶಯ್ಯೆಯ ಮೇಲೆ ಬಿದ್ದು ಬಿಟ್ಟನು.

ರಾಮನಿಗೆ ಕರೆಹೋಯಿತು,

"ಪಿತೃವಾಕ್ಯ ಪರಿಪಾಲನೆಯೇ ತನ್ನ ಪ್ರಥಮ ಕರ್ತವ್ಯ. ದಶರಥನು ಆಡಿದ ಮಾತು ತಪ್ಪಿದವನೆಂಬ ಹೆಸರು ಬರುವಂತೆ ಆಗಬಾರದು. ರಘುವಂಶದಲ್ಲಿ ಅಂತಹ ಹೆಸರು ಯಾರಿಗೂ ಇಲ್ಲ" ಎಂದುಕೊಂಡನು ರಾಮ. ತಂದೆಯ ಮಾತನ್ನು ಉಳಿಸಲಿಕ್ಕಾಗಿ ರಾಮನು ನಾರಬಟ್ಟೆಗಳನ್ನು ಕಟ್ಟಿಕೊಂಡು ವನವಾಸಕ್ಕೆ ಹೊರಡಲು ಸಿದ್ಧನಾದನು.

ಇದನ್ನು ತಿಳಿದು ಲಕ್ಷ್ಮಣನು ಮಹಾಸರ್ಪದಂತೆ ಭುಸುಗುಡುತ್ತಾ ಬಂದನು. ಕೈಕೇಯಿಯನ್ನೂ, ದಶರಥನನ್ನೂ ತುಂಡುತುಂಡು ಮಾಡಿ ಬಿಸುಡುವೆ ನೆಂದು ಕತ್ತಿ ಹಿರಿದನು, ಆಗ ರಾಮನು ತಮ್ಮ ನನ್ನು ಶಾಂತ ಪಡಿಸಿದನು.

ರಾಮನೊಂದಿಗೆ ಸೀತೆಯೂ, ಲಕ್ಷ್ಮಣನೂ ವನಕ್ಕೆ ಹೊರಟರು.

ಅದನ್ನು ಕೇಳಿ ಅಯೋಧ್ಯಾ ನಗರದ ಜನರು ರಾಮನ ದಾರಿಗೆ ಅಡ್ಡವಾಗಿ ಮಲಗಿದರು. ರಾಮನು ಅವರಿಗೆ ತಕ್ಕ ಹಿತವಚನಗಳನ್ನು ಹೇಳಿ ಸಮಾಧಾನ ಪಡಿಸಿ, ಗಂಗಾನದಿಯನ್ನು ದಾಟಿ, ಅರಣ್ಯ ಮಾರ್ಗ ವನ್ನು ಹಿಡಿದು ಭರದ್ವಾಜಾಶ್ರಮವನ್ನು ಸೇರಿದನು.

ಅಲ್ಲಿಂದ ರಾಮಲಕ್ಷ್ಮಣರು ಆಲದ ಹಾಲನ್ನು ತಲೆಗೆ ಅಂಟಿಸಿ ಮುನಿಗಳ ಹಾಗೆ ಜಡೆಮುಡಿ ಕಟ್ಟಿಕೊಂಡರು.

ಹಾಗಿರುವಾಗ ಇಲ್ಲಿ ದಶರಥನು ಮೂರ್ಛೆ ಯಿಂದೆದ್ದು ರಾಮನು ವನವಾಸಕ್ಕೆ ಹೋದ ಸಂಗತಿ ಯನ್ನು ತಿಳಿದು, "ರಾಮಾ ರಾಮಾ" ಎನ್ನುತ್ತಾ ಪ್ರಾಣಬಿಟ್ಟನು.

ಆಗ ಭರತ ಶತ್ರುಘ್ನರು ತಾತನ ಊರಿನಲ್ಲಿದ್ದರು. ಅಲ್ಲಿಂದ ಬಂದ ಭರತ ಶತ್ರುಘ್ನರು, ತಂದೆಗೆ ಉತ್ತರ ಕ್ರಿಯೆಗಳನ್ನು ಮಾಡಿದರು. ಭರತನು ನಂದಿ ಗ್ರಾಮ ದಲ್ಲೇ ಇದ್ದುಬಿಟ್ಟನು.

ತಾಯಿಯ ಮುಖ ನೋಡಲಿಕ್ಕೇ ಭರತನಿಗೆ ಅಸಹ್ಯವೆನಿಸಿತು. ಶತ್ರುಘ್ನನು ಮಂಥರೆ ದಾಸಿಯ




ಗೂನು ನಿಮಿರುವ ಹಾಗೆ ಹೊಡೆಯಲು ನೋಡಿದನು. ಆದರೆ ಅವಳು ಅಲ್ಲೆಲ್ಲಿಯೂ ಕಾಣಲಿಲ್ಲ.

ರಾಮನನ್ನು ಕರೆದುಕೊಂಡು ಬರುವ ತೀರ್ಮಾನದಲ್ಲಿ ಭರತನು ಸಪರಿವಾರದೊಂದಿಗೆ, ಶ್ವೇತ ಛತ್ರಗಳನ್ನು ಹಿಡಿಸಿಕೊಂಡು ಅರಣ್ಯಕ್ಕೆ ಹೊರಟನು.

ಹಾಗೆ ಬಂದ ಭರತನೊಂದಿಗೆ ರಾಮನು "ನಮ್ಮ ತಂದೆಯ ಮಾತನ್ನು ಉಳಿಸಬೇಕಾದುದು ನಮ್ಮಿಬ್ಬರಿಗೂ ಕರ್ತವ್ಯವಾಗಿದೆ. ನೀನು ನನ್ನ ತಮ್ಮನು. ನಾನು ಹೇಳಿದ ಹಾಗೆ ನೀನು ಕೇಳು. ನೀನು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪಾಲಿಸಿಕೊಂಡಿರು" ಎಂದು ಹೇಳಿದನು.

ಭರತನು ರಾಮನ ಮಾತನ್ನು ಮೀರಲಾಗದೆ, "ನಾನು ರಾಜ್ಯಪಾಲನೆಯನ್ನೇನೋ ನೋಡಿಕೊಳ್ಳುತ್ತೇನೆ. ನಿನ್ನ ಲಾಂಛನವಾಗಿ ನಿನ್ನ ಪಾದುಕೆಗಳನ್ನು ಒಯ್ದು ಸಿಂಹಾಸನದ ಮೇಲೆ ಇರಿಸಿಕೊಳ್ಳುತ್ತೇನೆ" ಎಂದು ಬೇಡಿ ರಾಮನ ಪಾದುಕೆಗಳನ್ನು ಪಡೆದು ತಲೆಯ ಮೇಲೆ ಹೊತ್ತುಕೊಂಡು ಅಯೋಧ್ಯೆಗೆ ಹಿಂದಿರುಗಿ, ರಾಮನ ಆಜ್ಞೆಯಂತೆಯೇ ನಡೆದುಕೊಂಡಿದ್ದನು ಭರತ.

ರಾಮನು ಸೀತಾಲಕ್ಷ್ಮಣ ಸಮೇತನಾಗಿ ಅರಣ್ಯದೊಳಗೆ ಮುಂದೆ ಮುಂದೆ ಹೋದನು.

ಖರ, ದೂಷಣ, ತ್ರಿಶಿರರೆಂಬವರು ರಾವಣನ ಪ್ರತಿನಿಧಿಗಳಾಗಿ ವಿಂಧ್ಯ ಪರ್ವತಗಳಿಗೆ ದಕ್ಷಿಣದಲ್ಲಿರುವ ಭೂಮಿಯನ್ನೆಲ್ಲಾ ಆಕ್ರಮಿಸಿಕೊಂಡಿದ್ದರು. ಅವರು ರಾಕ್ಷಸರ ಗುಂಪಿನೊಂದಿಗೆ ತಿರುಗುತ್ತ, ಹೊಸದಾಗಿ ಅರಣ್ಯದೊಳಗೆ ಪ್ರವೇಶಿಸಿದ ನರರನ್ನು ನೋಡಿದರು.

ಹಸಿದು ತಿರುಗುವ ಕ್ರೂರ ಮೃಗಗಳ ಹಾಗೆ ರಾಕ್ಷಸರು ಸೀತಾರಾಮ ಲಕ್ಷ್ಮಣರನ್ನು ಕೊಲ್ಲಲಿಕ್ಕೆ ದೊಡ್ಡ ದೊಡ್ಡ ಬಂಡೆಗಳನ್ನೂ, ಕತ್ತಿಗಳನ್ನೂ, ಶೂಲಗಳನ್ನೂ ಹಿಡಿದುಕೊಂಡು ರಾಮಲಕ್ಷ್ಮಣ ಸೀತೆಯರ ಸುತ್ತಲೂ ಮುತ್ತಿಕೊಂಡರು.

ರಾಮಲಕ್ಷ್ಮಣರು ಧನುರ್ಬಾಣಗಳನ್ನು ಧರಿಸಿ ಆ ರಾಕ್ಷಸರನ್ನೆಲ್ಲಾ ಚೆಲ್ಲಾಚೆದರಾಗಿ ಓಡಿಸಿದರು. ಓಡಿದರೂ ತಿರುಗಿ ಬಂದು ಬಿದ್ದರು. ರಾಮನು ಖರದೂಷಣರನ್ನು ಕೊಂದನು. ಅನೇಕ ಮಂದಿ ರಾಕ್ಷಸರು ಸತ್ತರು. ಬದುಕಿ ಉಳಿದವರು ಓಡಿಹೋದರು.

ರಾಮನು ವಾಸಕ್ಕೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತಾ ಹೋಗುವಾಗ ತಾಳೆಯ ಮರವನ್ನು ಮೀರಿಸುವ ಪ್ರಮಾಣದಲ್ಲಿರುವ, ಭಯಂಕರಾಕಾರನಾದ ವಿರಾಧನೆಂಬವನು, ಸೀತೆಯನ್ನು ಅಂಗೈಯಲ್ಲೆತ್ತಿಕೊಂಡು ಓಡಿಹೋಗತೊಡಗಿದನು. ರಾಮನು ಒಂದು ಮಹಾ ಅಸ್ತ್ರವನ್ನು ಪ್ರಯೋಗಿಸಿ ಆ ರಾಕ್ಷಸನನ್ನು ಕೊಂದನು.

ಹತಶೇಷರಾದ ರಾಕ್ಷಸರು ಶೂರ್ಪನಖಿಯ ಬಳಿಗೆ ಹೋಗಿ, ಖರದೂಷಣರು ಸತ್ತುಹೋದ ಸಮಾಚಾರವನ್ನು ಹೇಳಿದರು.



ಶೂರ್ಪನಖಿ ರಾವಣಾಸುರನ ತಂಗಿ. ಖರ, ದೂಷಣರು ಶೂರ್ಪನಖಿಗೆ ತಮ್ಮಂದಿರ ವರಿಸೆ ಯುವರಾಗಬೇಕು.

ದಂಡಕಾರಣ್ಯದಲ್ಲಿ ತುಂಬಿ ತಿರುಗುವ ರಾಕ್ಷಸರಿಗೆಲ್ಲಾ ಶೂರ್ಪನಖಿಯೇ ನಾಯಕಿ. ಅವಳು ರಾಮ ಲಕ್ಷ್ಮಣರನ್ನು ಸೀಳಿ ಚೆಂಡಾಡಿಬಿಡಬೇಕೆಂದು ಹೊರಟಳು.

ಬೀಳುಗಳೇ ಮರದ ಕಾಂಡಗಳಾಗಿ ಹೋದ ಐದು ಆಲದ ಮರಗಳಿನಿಸಿದ ಪ್ರಾಂತಕ್ಕೆ ಪಂಚವಟಿ ಎಂದು ಹೆಸರಾಗಿತ್ತು. ರಾಮನು ಸೀತಾಲಕ್ಷ್ಮಣರೊಂದಿಗೆ ಅಲ್ಲಿಗೆ ಬಂದು ಸೇರಿದನು. ಸಮೀಪದಲ್ಲಿ ಗೋದಾವರಿ ನದಿ ಹರಿಯುತ್ತಿತ್ತು.

ಅಲ್ಲಿ ರಾಘುನು ಪರ್ಣಶಾಲೆ ನಿರ್ಮಿಸಿಕೊಂಡು ಸೀತೆಯೊಂದಿಗೆ ವನವಿಹಾರ ಮಾಡುತ್ತ, ವನವಾಸದಲ್ಲಿ ಕಾಲ ಕಳೆಯುತ್ತಿದ್ದನು, ಲಕ್ಷ್ಮಣನು ಅಣ್ಣ ಅತ್ತಿಗೆಯರನ್ನು ಸೇವಿಸುತ್ತ ಪರ್ಣಶಾಲೆಯನ್ನು ಸುತ್ತಿಕೊಂಡು ರಾತ್ರೀ ಹಗಲೂ ಕಾವಲು ಕಾದುಕೊಂಡಿದ್ದನು.

ಶೂರ್ಪನಖಿ ಅಟ್ಟಹಾಸದಿಂದ ಅವರ ಮೇಲೆ ಬೀಳಲು ಬರುತ್ತ, ರಾಮನನ್ನು ನೋಡಿ ತನ್ನನ್ನು ಮದುವೆಯಾಗುವಂತೆ ಕೇಳಿಕೊಂಡಳು. ಬೇಡಿಕೆ ನಿರರ್ಥಕವಾಗಲು ಕಾಡಿ ಬೆದರಿಸಿ ನೋಡಿದಳು. ಸೀತೆಯನ್ನು ಕೊಲ್ಲುವೆನೆಂದು ಹಾರಿದಳು, ಆಗ ರಾಮಾಜ್ಞೆಯಂತೆ ಲಕ್ಷ್ಮಣನು ಶೂರ್ಪನಖಿಯನ್ನು ಕೊಲ್ಲದೆ, ಕಿವಿಯನ್ನೂ ಮೂಗನ್ನೂ ಕೊಯಿದು ಅಲ್ಲಿಂದ ಓಡಿಸಿಬಿಟ್ಟನು.

ಶೂರ್ಪನಖಿ ಲಂಕೆಗೆ ಹೋಗಿ ರಾವಣಾಸುರನೊಂದಿಗೆ, ದಂಡಕಾರಣ್ಯದಲ್ಲಿ ತನಗೆ ನಡೆದ ಪರಾಭವವನ್ನು ಮೊರೆಯಿಟ್ಟಳು. ಸೀತೆಯ ಅಂದಚೆಂದಗಳನ್ನು ವರ್ಣಿಸಿ ಅವನ ಆಸಕ್ತಿಯನ್ನು ಕೆರಳಿಸಿದಳು. ಅವಳ ಹೇಳಿಕೆಯನ್ನು ಕೇಳಿದ ರಾವಣನು ರಾಮನಿಗೆ ಪ್ರತೀಕಾರ ಮಾಡಲು ಸೀತೆಯನ್ನು ಅಪಹರಿಸಿ ತರಬೇಕೆಂದು ಮಾರೀಚನನ್ನು ಬಂಗಾರದ ಜಿಂಕೆಯಾಗಿ ಮಾಡಿ ಕಳುಹಿಸಿಕೊಟ್ಟನು.

ಸೀತೆ ಮಾಯಾ ಮೃಗವನ್ನು ನೋಡಿ ಅದರ ಮೇಲೆ ಆಶೆಪಟ್ಟಳು. ಸೀತೆಯ ಆಶೆಯಂತೆ ಅದನ್ನು ಹಿಡಿದು ತರಲು ರಾಮನು ಹೊರಟನು. ಅದು ಸಿಕ್ಕದೆ ಓಡಲು ರಾಮನು ಅದರ ಮೇಲೆ ಬಾಣ ಪ್ರಯೋಗ ಮಾಡಿದನು. ಆಗ ಮಾಯದ ಜಿಂಕೆ ಮಾರೀಚನಾಗಿ "ಹಾ ಸೀತೆ! ಹಾ ಲಕ್ಷ್ಮಣಾ!" ಎಂದು ರಾಮನ ಕಂಠಸ್ವರದಂತೆಯೇ ಗಟ್ಟಿಯಾಗಿ ಆರ್ತನಾದ ಮಾಡಿ ಸತ್ತು ಹೋದನು.

ಅದು ರಾಕ್ಷಸ ಮಾಯೆ ಎಂದೂ, ರಾಮನಿಗೆ ಯಾವ ಕೇಡೂ ಇಲ್ಲವೆಂದೂ ಲಕ್ಷ್ಮಣನು ಎಷ್ಟು ಹೇಳಿದರೂ ಸೀತೆ ಕೇಳಲಿಲ್ಲ. ನಿಷ್ಠುರೋಕ್ತಿಗಳಿಂದ ಲಕ್ಷ್ಮಣನನ್ನು ಜರೆದಳು. ಲಕ್ಷ್ಮಣನು ಪರ್ಣಶಾಲೆಯ ಮುಂದೆ ಮೂರು ಗೆರೆಗಳನ್ನು ಎಳೆದು, ಅದನ್ನು ದಾಟಬೇಡವೆಂದು ಸೀತೆಗೆ ಹೇಳಿ ಹೋದನು.



ಒಬ್ಬಳೇ ಇರುವ ಸೀತೆಯ ಮುಂದೆ ವೃದ್ಧ ತಾಪಸಿಯ ವೇಷದಲ್ಲಿ ರಾವಣನು ಬಂದು ಭಿಕ್ಷೆ ಕೇಳಿದನು. ಸೀತೆ ಅವನಿಗೆ ಭಿಕ್ಷೆ ಹಾಕಲು ಮೂರನೆಯ ಗೀಟಿನ ಹತ್ತಿರ ಬಂದ ಕೂಡಲೇ, ರಾವಣನು ಅವಳನ್ನು ಎಳೆದು ನಿಜರೂಪ ಧರಿಸಿ ಎತ್ತಿಕೊಂಡು ಹೋದನು.

ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಹೊರಟರು. ಆಗ ರಾಮನು ಸಾಮಾನ್ಯ ಮಾನವರ ಹಾಗೆಯೇ ಸೀತೆಯನ್ನು ನೆನೆ ನೆನೆದು ವಿಲಪಿಸಿದನು.

ಅವರು ಹಾಗೆ ಹೋಗುತ್ತಿರಲು, ರೆಕ್ಕೆಗಳು ಕಡಿಯಲ್ಪಟ್ಟು ಬಿದ್ದ ಜಟಾಯು ಪಕ್ಷಿ ರಾಮನನ್ನು ನೋಡಿ, "ಸೀತೆಯನ್ನು ಒಯ್ಯುವ ರಾವಣನನ್ನು ಅಡ್ಡಗಟ್ಟಿದೆನು. ಹೋರಾಡುವಾಗ ರಾವಣನು ನನ್ನ ರೆಕ್ಕೆಗಳನ್ನು ಕಡಿದು, ದಕ್ಷಿಣ ದಿಕ್ಕಿಗೆ ಸೀತೆಯನ್ನು ಎತ್ತಿಕೊಂಡು ಹೋದನು" ಎಂದು ಹೇಳಿ ಪ್ರಾಣ ಬಿಟ್ಟಿತು.

ದಶರಥನ ಆಪ್ತ ಮಿತ್ರನಾದ ಜಟಾಯುವಿಗೆ ರಾಮನು ದಹನ-ಸಂಸ್ಕಾರವನ್ನು ಮಾಡಿ, ಅಲ್ಲಿಂದ ಹೊರಟನು. ಆಗ ರಾಮಲಕ್ಷ್ಮಣರನ್ನು ಕಬಂಧನ ಹಸ್ತಗಳು ವನ್ಯಮೃಗಗಳೊಂದಿಗೆ ಬಾಚಿ ಹಿಡಿದು ಎಳೆದುಕೊಂಡವು.

ಕಬಂಧನದು ವಿಚಿತ್ರವಾದ ಆಕಾರ. ಪರ್ವತದಂತಹ ಹೊಟ್ಟೆ. ಅದರಲ್ಲೇ ಕೋರೆ ಹಲ್ಲುಗಳಿರುವ ದೊಡ್ಡ ಬಾಯಿ. ಬೆಂಕಿಯ ಕೆಂಡದಂತಹ ಒಂದೇ ಒಂದು ಕಣ್ಣು. ಯೋಜನದಷ್ಟು ಉದ್ದಕ್ಕೆ ಚಾಚಿಕೊಳ್ಳುವ ಎರಡು ಕೈಗಳು. ತಲೆ ಎಂಬುದು ಇಲ್ಲವೇ ಇಲ್ಲ. ಕಾಲುಗಳೂ ಇರಲಿಲ್ಲ.

ಇಂತಹ ವಿಲಕ್ಷಣ ರೂಪದ ಕಬಂಧನ ಕೈಗಳನ್ನು ರಾಮಲಕ್ಷ್ಮಣರು ಕಡಿದು ಹಾಕಿದರು. ಕಬಂಧನು ಶಾಪಗ್ರಸ್ತನಾದ ಗಂಧರ್ವನೆಂದು ಆಗ ತಿಳಿಯಿತು. ಅವನು ಶಾಪ ವಿಮೋಚನೆ ಹೊಂದಿ, ಗಂಧರ್ವನಾಗಿ, "ರಾಮಾ, ನಿನಗೆ ವಾನರರೊಂದಿಗೆ ಸ್ನೇಹವಾಗುತ್ತದೆ. ಅದು ನಿನಗೆ ತುಂಬಾ ಉಪಕಾರವಾಗುತ್ತದೆ" ಎಂದು ರಾಮನಿಗೆ ಹೇಳಿ ತನ್ನ ಲೋಕಕ್ಕೆ ಹೋದನು.

ಋಷ್ಯಮೂಕ ಪರ್ವತದ ಮೇಲೆ ವಾನರ ವೀರರೊಂದಿಗೆ ಇರುತ್ತಿದ್ದ ಸುಗ್ರೀವನು ದೂರದಿಂದ ರಾಮಲಕ್ಷ್ಮಣರನ್ನು ನೋಡಿ, ಹನುಮಂತನನ್ನು ಅವರ ಬಳಿಗೆ ಕಳುಹಿಸಿದನು.

ಮೂರು ಕೋಟಿ ದೇವತೆಗಳು ವಾನರರಾಗಿ ಹುಟ್ಟಿದ್ದರು. ಅವರಲ್ಲಿ ಹನುಮಂತನು ಶಿವನ ಅಂಶದಿಂದ ಹುಟ್ಟಿದವನು. ವಾಯುದೇವನ ಅನುಗ್ರಹದಿಂದ, ಅಂಜನಾದೇವಿಯ ಹೊಟ್ಟೆಯಲ್ಲಿ ಹುಟ್ಟಿದವನು ಹನುಮಂತ. ಆಂಜನೇಯ, ವಾಯುಪುತ್ರ, ಮಾರುತಿ ಮುಂತಾದುವು ಅವನ ಹೆಸರುಗಳು.

ಚಿಕ್ಕಂದಿನಲ್ಲಿ ಆಂಜನೇಯನು ಉದಯಸೂರ್ಯ ಬಿಂಬವನ್ನು ನೋಡಿ ಹಣ್ಣೆಂದು ಭ್ರಮಿಸಿ ಹಿಡಿದು

ತಿನ್ನಲು ಆಕಾಶಕ್ಕೆ ಹಾರಿ ಹೋಗುವಾಗ, ಇಂದ್ರನು ವಜ್ರಾಯುಧದಿಂದ ಹೊಡೆದನು. ಮಾರುತಿ ನೆಲಕ್ಕೆ ಬಿದ್ದು ಮೂರ್ಛಿತನಾದನು. ಅದನ್ನು ನೋಡಿ ವಾಯುದೇವನಿಗೆ ಕೋಪ ಬಂದು ಸ್ತಂಭಿಸಿ ನಿಂತನು. ಆಗ ದೇವತೆಗಳು ಹನುಮಂತನಿಗೆ ಚಿರಂಜೀವಿಯಾಗಿರುವಂತೆ ಆಶೀರ್ವದಿಸಿ, ಅನೇಕ ವರಗಳನ್ನೂ ಕೊಟ್ಟು, ವಾಯುವನ್ನು ಸಂತೋಷಪಡಿಸಿದರು.

ಬ್ರಹ್ಮನು ಆಂಜನೇಯನ ಕಿವಿಗಳಿಗೆ ವಿಚಿತ್ರ ಪ್ರಭಾವವಿರುವ ಕುಂಡಲಗಳನ್ನು ತಗಲಿಸಿ, ಅವು ಯಾವನ ಕಣ್ಣಿಗೆ ಕಂಡು ಮೆಚ್ಚಿಕೊಳ್ಳುವನೋ ಅವನೇ ವಿಷ್ಣುವೆಂದು ಗುರುತಿಸಿ ಆರಾಧ್ಯದೈವವಾಗಿ ಸೇವಿಸುವಂತೆ ಹನುಮಂತನಿಗೆ ಹೇಳಿದನು.

ಹನುಮಂತನು ಸುಗ್ರೀವನಿಂದ ರಾಮಲಕ್ಷ್ಮಣರ ಬಳಿಗೆ ಕಳುಹಿಸಲ್ಪಟ್ಟು, ಬ್ರಹ್ಮಚಾರಿಯ ರೂಪದಲ್ಲಿ ಬಂದನು. ರಾಮನು ಅವನನ್ನು ನೋಡಿ ಲಕ್ಷ್ಮಣನೊಂದಿಗೆ, "ಲಕ್ಷ್ಮಣಾ, ಸುಂದರನಾಗಿ ಕಾಣುವ ಇವನ ಕರ್ಣಕುಂಡಲಗಳು ಇವನ ಮುಖಕ್ಕೆ ಅದೆಷ್ಟು ಚೆನ್ನಾಗಿ ಒಪ್ಪುತ್ತವೋ ನೋಡಿದೆಯಾ ?" ಎಂದು ಮೆಚ್ಚಿಕೊಂಡನು.

ಆಗ ಹನುಮಂತನು ರಾಮನು ವಿಷ್ಣುವಿನ ಅವತಾರವೆಂದು ಗುರುತಿಸಿ, ರಾಮನ ವಿಶ್ವಾಸದ ಬಂಟನಾಗಿ ಪ್ರಸಿದ್ಧನಾದನು. ರಾಮನ ಬಾಯಿಯಿಂದ ಸುಂದರನೆನ್ನಿಸಿಕೊಂಡ ಹನುಮಂತನಿಗೆ 'ಸುಂದರ' ಎಂಬ ಹೆಸರೂ ಬಂದಿತು.

ಹನುಮಂತನೊಂದಿಗೆ ಸುಗ್ರೀವನ ಬಳಿಗೆ ಬಂದ ರಾಮನು, ಸುಗ್ರೀವನೊಂದಿಗೆ ಮಾತುಕತೆಯಾಡಿದನು. ಅವರಿಬ್ಬರೂ ಅಗ್ನಿಸಾಕ್ಷಿಯಾಗಿ ಮಿತ್ರರಾದರು.

ಸುಗ್ರೀವನ ಅಣ್ಣನಾದ ವಾಲಿ ಕಿಷ್ಕಿಂಧೆಗೆ ರಾಜನಾಗಿದ್ದನು, ಅವನು ತಮ್ಮನ ಮೇಲೆ ದ್ರೋಹಿ ಎಂಬ ವೃಥಾಪವಾದವನ್ನು ಹಾಕಿ ಕೊಲ್ಲಲು ನೋಡುತ್ತಿದ್ದನು. ಸುಗ್ರೀವನು ಅವನಿಂದ ತಪ್ಪಿಸಿಕೊಂಡು ಋಷ್ಯಮೂಕ ಪರ್ವತವನ್ನು ಸೇರಿಕೊಂಡಿದ್ದನು, ಸುಗ್ರೀವನ ಹೆಂಡತಿಯನ್ನು ಕೂಡಾ ವಾಲಿ ನಿರ್ಬಂಧದಲ್ಲಿರಿಸಿದ್ದನು.

ಆಪತ್ತಿನಲ್ಲಿರುವ ಮಿತ್ರನನ್ನು ಕಾಪಾಡುವುದು ತನ್ನ ಧರ್ಮವೆಂದು ಭಾವಿಸಿ ರಾಮನು, ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ರಾಜನನ್ನಾಗಿ ಮಾಡುವೆನೆಂದು ಭಾಷೆ ಕೊಟ್ಟನು.

ವಾಲಿಯ ಇದಿರಲ್ಲಿರುವವರ ಅರ್ಧ ಬಲವು ವಾಲಿಯನ್ನು ಸೇರುವುದೆಂಬ, ವರವು ಅವನಿಗಿತ್ತು. ಅಂತಲೇ ರಾಮನು ವಾಲಿಯ ಇದಿರಿಗೆ ನಿಲ್ಲದೆ, ಮರೆಯಾಗಿದ್ದು, ವಾಲಿಸುಗ್ರೀವರು ದ್ವಂದ್ವಯುದ್ಧ ಮಾಡುವಾಗ, ಬಾಣ ಪ್ರಯೋಗ ಮಾಡಿದನು. ಅದರಿಂದ ವಾಲಿಯ ಅಂತ್ಯವಾಯಿತು.






ಒಂದಾನೊಂದು ದೇಶದಲ್ಲಿ ಒಬ್ಬ ರಾಜನಿದ್ದನು. ಅವನಿಗೆ ಒಬ್ಬಳು ಕುಮಾರಿಯ ಹೊರತು ಬೇರೆ ಮಕ್ಕಳಿರಲಿಲ್ಲ. ಆ ಹುಡುಗಿ ಅತ್ಯಂತ ಸುಂದರಿಯಾಗಿದ್ದುದರಿಂದ ಅನೇಕ ಮಂದಿ ಯುವಕರು ಬಂದು ಅವಳನ್ನು ತಮಗೆ ಕೊಟ್ಟು ಮದುವೆ ಮಾಡುವಂತೆ ರಾಜನನ್ನು ಒತ್ತಾಯಿಸತೊಡಗಿದರು.

ರಾಜನು ಬುದ್ಧಿವಂತಿಕೆಯಲ್ಲಿ ಬಹಳ ಉದ್ದಂಡನಾಗಿದ್ದನು. ಅವನನ್ನು ಮೋಸಪಡಿಸಲು ಯಾರಿಗೂ ಸಾಧ್ಯವಾಗದು. ಆದುದರಿಂದ ಅವನು ಕುಮಾರಿಯ ಮದುವೆ ವಿಷಯವಾಗಿ ಒಂದು ಪಂದ್ಯವಿಡಿಸಿದನು. ಅದೇನೆಂದರೆ, "ನನ್ನನ್ನು ಯಾವನು ಮೋಸಪಡಿಸುವನೋ ಅವನಿಗೇ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ, ಅವನಿಗೆ ನನ್ನ ಅರ್ಧ ರಾಜ್ಯವನ್ನು ಕೂಡಾ ಕೊಡುತ್ತೇನೆ. ಮುಂದೆ ಉಳಿದರ್ಧ ರಾಜ್ಯಕ್ಕೂ ಅಳಿಯನೇ ವಾರಸನಾಗುತ್ತಾನೆ" ಎಂದು ರಾಜ್ಯದೊಳಗೆಲ್ಲಾ ಡಂಗುರ ಹಾಕಿಸಿದನು. ಅದರೊಂದಿಗೆ ಇನ್ನೊಂದು ವಿಧಿಯೂ ಇದ್ದಿತು. ಸೋತವರು ಮೈತುಂಬ ಕೊರಡೇ ಛಡಿ ತಿನ್ನಬೇಕು! ಸುಂದರಿಯಾದ ರಾಜಕುಮಾರಿಯನ್ನು ಮದುವೆಯಾಗಬೇಕೆಂಬ ಆಶೆಯಿಂದ ಅನೇಕ ಮಂದಿ ಯುವಕರು ಬಂದು, ರಾಜನನ್ನು ಮೋಸಪಡಿಸಲಾಗದೆ ಸೋತು, ಕೊರಡೆ ಪೆಟ್ಟು ತಿಂದರು.

ಆ ನಗರದಲ್ಲಿ ಒಬ್ಬ ಧನಿಕನಿದ್ದನು. ಅವನಿಗೆ ಮೂವರು ಮಗಂದಿರು, ಅವರಲ್ಲಿ ದೊಡ್ಡವರಿಬ್ಬರೂ ಬಹಳ ಬುದ್ಧಿವಂತರಾಗಿದ್ದರು.

ಮೂರನೆಯವನು ಮಾತ್ರ ಬಹಳ ಮಂದಬುದ್ಧಿಯ ಮೂಢ. ಅವನು ಎಂದಿಗೂ ಯಾವ ಕಾರ್ಯಕ್ಕೂ ಉಪಯೋಗವಿಲ್ಲದವನಾಗಿ ಎಲ್ಲರಿಂದಲೂ ನಿರಾಕರಿಸಲ್ಪಟ್ಟು, ಉಗುರು ಚಿವುಟುತ್ತಾ ಮೂಲೆಯಲ್ಲಿ ಕುಳಿತಿರುವವನು.

ಧನಿಕನ ಹಿರಿಯ ಮಗನು ಒಂದು ದಿನ ತಂದೆಯೊಂದಿಗೆ, "ಅಪ್ಪಾ, ನಮ್ಮ ರಾಜಕುಮಾರಿಯನ್ನು ಮದುವೆಯಾಗಲು ನಾನೂ ಹೋಗಿ ಪ್ರಯತ್ನಿಸುತ್ತೇನೆ" ಎಂದನು.

"ಹೋಗಿ ಬಾ. ಇಷ್ಟರವರೆಗೆ ಪ್ರಯತ್ನಿಸಿದವರು ನಿನಗಿಂತ ಬುದ್ಧಿವಂತರೇನು?" ಎಂದನು ತಂದೆ.

ದೊಡ್ಡವನು ಹೊರಟು ರಾಜನ ಅರಮನೆಗೆ ಹೋಗಿ, ಮಹಾರಾಜನ ದರ್ಶನವನ್ನು ಕೇಳಿದನು.

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಭಟರು ಅವನನ್ನು ರಾಜನಿರುವ ಕೋಣೆಗೆ ಕರೆದುಕೊಂಡು ಹೋದರು. ಅವನು ರಾಜನಿಗೆ ನಮಸ್ಕಾರ ಮಾಡಿ, ಕಿಟಕಿಯ ಮೂಲಕ ಹೊರಗೆ ನೋಡಿ, "ಆಹ! ಅಲ್ಲಿ ಕಾಣುವ ಮೂರು ಕಪ್ಪು ಬಾತುಕೋಳಿಗಳು ಎಷ್ಟು ಸುಂದರವಾಗಿವೆ!" ಎಂದನು.

"ಸಾಕು ನಿಲ್ಲಿಸು. ನಿನ್ನ ಬುದ್ಧಿವಂತಿಕೆ ಬೆಳಗಾದ ಹಾಗೇ ಇದೆ. ನೋಡಲಿಕ್ಕೆ ಒಂದು ಕಪ್ಪು ಬಾತುಕೋಳಿ ಸಾಲದೇನು? ಲೋ! ಇವನನ್ನು ಎಳೆದುಕೊಂಡು ಹೋಗಿ ಛಡಿ ಕೊಟ್ಟು ಕಳಿಸಿಬಿಡಿ" ಎಂದನು ರಾಜ. ಭಟರು ಅವನ ಬೆನ್ನಿನ ಮೇಲೆ ಬಾಸುಂಡೆಗಳೇಳುವ ಹಾಗೆ ಕೊರಡೆಯಿಂದ ಹೊಡೆದು ಕಳುಹಿಸಿದರು. ಆಮೇಲೆ, ಎರಡನೇ ಮಗನಿಗೆ ಕೂಡಾ ಅದೇ ಬುದ್ಧಿ ಹುಟ್ಟಿತು.

ಅವನು ಕೂಡಾ ತಂದೆಯ ಅನುಮತಿ ಪಡೆದು ರಾಜನ ದರ್ಶನಕ್ಕೆ ಹೋದನು. ಅವನನ್ನು ಕೂಡಾ ರಾಜನ ಕೋಣೆಗೆ ಕಳುಹಿಸಲಾಯಿತು.

ಅವನು ಕಿಟಕಿಯಿಂದ ಹೊರಗೆ ನೋಡಿ, "ಅದೇನದು? ಆ ಮರದ ಮೇಲೆ ಕುಳಿತಿರುವ ಕಾಗೆಯ ಬೆನ್ನಿನ ಮೇಲೆ ಮೂರು ಬೆಳ್ಳಗಿನ ಗೆರೆಗಳಿವೆಯಲ್ಲಾ!" ಎಂದನು.

"ಕಾಗೆಯ ಬೆನ್ನಿನ ಮೇಲೆ ಗೆರೆಗಳಿರುವುದು ಸುಳ್ಳಾಗಿ, ನಿನ್ನ ಬೆನ್ನಿನ ಮೇಲೆ ಬಾಸುಂಡೆಗಳೇಳುವುದು ನಿಜವಾಗುತ್ತದೆ. ಎಲೋ, ಇವನನ್ನು ಎಳೆದೊಯ್ದು ಬೆನ್ನಿಗೆ ಛಡಿಯೇರಿಸಿ ಕಳುಹಿಸಿಬಿಡಿರಿ" ಎಂದು ರಾಜನು ಅವನನ್ನು ಭಟರಿಗೆ ಒಪ್ಪಿಸಿದನು.

ಎರಡನೆಯವನು ಕೂಡಾ ಪರಾಭವದ ಪೆಟ್ಟು ತಿಂದು ಹಿಂದಿರುಗಿದ ಮೇಲೆ, ಮೂರನೆಯ ಮಂದಮತಿ ತಂದೆಯೊಂದಿಗೆ, ತಾನು ಕೂಡಾ ಹೋಗಿ ರಾಜನನ್ನು ಮೋಸಪಡಿಸಿ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳಲು ಆಗುವುದೋ ನೋಡುತ್ತೇನೆ ಎಂದನು.

"ತುಂಬಾ ಬುದ್ಧಿವಂತರಾದ ನಿನ್ನ ಅಣ್ಣಂದಿರಿಂದ ಆಗದ ಕೆಲಸ ನಿನ್ನಿಂದ ಆಗುತ್ತದೇನು? ನೀನೊಬ್ಬ ಅಸಲೇ ಮಂದಮತಿ!" ಎಂದನು ತಂದೆ.

ಆದರೆ ಅವನು ಹೋಗುವೆನೆಂದು ಹಟ ಹಿಡಿದನು. "ಸರಿ, ಹೋಗು. ಅಷ್ಟು ಉಮೇದಿದ್ದರೆ ಕೊರಡೇ ಪೆಟ್ಟು ತಿಂದು ಬೆನ್ನಿನ ದಪ್ಪ ಇಳಿಸಿಕೊಂಡು ಬಾ" ಎಂದನು ತಂದೆ.

ಮೂರನೆಯವನು ಗೋಡೆಯ ಕೊಕ್ಕೆಯಲ್ಲಿದ್ದ ಕುಲಾವಿಯನ್ನೆತ್ತಿ ವರೆಸಿ ಕೈಯಲ್ಲಿ ಹಿಡಿದುಕೊಂಡು ರಾಜನ ಅರಮನೆಗೆ ಹೊರಟನು.

ದಾರಿಯಲ್ಲಿ ಅವನಿಗೆ ಮಡಕೆಗಳನ್ನು ಹೊತ್ತುಕೊಂಡವಳೊಬ್ಬಳು ಸಿಕ್ಕಿದಳು.

"ಏನಮ್ಮ! ಇವುಗಳನ್ನು ಎಲ್ಲಿಗೆ ಒಯ್ಯುವಿ?" ಎಂದು ಮಂದಮತಿ ಕೇಳಿದನು.

"ಮಾರಲಿಕ್ಕೆ ಅಂಗಡಿ ಬೀದಿಗೆ ಒಯ್ಯುವೆನಪ್ಪಾ" ಎಂದಳು ಮಡಕೆಯವಳು.



ಮಂದಮತಿ ಅವುಗಳ ಬೆಲೆ ಕೇಳಿದನು. ಮಡಕೆಗಳ ಬೆಲೆ ಮೂರು ರೂಪಾಯಿ ಎಂದಳು ಆ ಹೆಂಗುಸು.

"ಐದು ರೂಪಾಯಿ ಕೊಡುತ್ತೇನೆ. ನಾನು ಹೇಳಿದ ಹಾಗೆ ಮಾಡುವಿಯಾ ?" ಎಂದು ಮಂದಮತಿ ಕೇಳಲು, ಅವಳು ಒಪ್ಪಿಕೊಂಡಳು. ಇಬ್ಬರೂ ಮಹಾರಾಜನ ಅರಮನೆಯ ಹತ್ತಿರ ಹೋದರು. ಮಡಕೆಯವಳು ಏನು ಮಾಡಬೇಕೆಂದನ್ನು ಮಂದಮತಿ ಅವಳಿಗೆ ಹೇಳಿಕೊಟ್ಟನು.

ಇಬ್ಬರೂ ರಾಜನ ಮನೆಯ ಹತ್ತಿರ ನಿಂತರು. ಮಂದಮತಿ ಗಟ್ಟಿಯಾಗಿ, "ಎಷ್ಟು ಸಾರಿ ಹೇಳಲಮ್ಮ ನಿನಗೆ ? ನಾನಿದನ್ನು ಮಾರುವುದೇ ಇಲ್ಲ. ಇದು ನನಗೇ ಬೇಕು. ಸುಮ್ಮನೆ ನನ್ನನ್ನು ಪೀಡಿಸಬೇಡ !" ಎಂದು ಪದೇ ಪದೇ ಕೂಗಾಡತೊಡಗಿದನು. ಅವಳೂ ಬಿಡದೆ ಏನನ್ನೋ ಕೇಳುತ್ತಿದ್ದಳು.

ಅವನ ಕೂಗಾಟ ಕೇಳಿ ರಾಜನು ಹೊರಗೆ ಬಂದು, ಮಂದಮತಿಯನ್ನು ನೋಡಿ, "ಏನಿದು ಗಲಾಟೆ ? ಏಕೆ ಹೀಗೆ ಕೂಗುತ್ತೀ ? ಮಾರಲಿಕ್ಕೆ ನಿನ್ನ ಹತ್ತಿರ ಏನಿದೆ ?" ಎಂದು ಕೇಳಿದನು.

"ಈ ಕುಲಾವಿ, ಮಹಾಪ್ರಭೂ. ಇದನ್ನು ತಲೆಯಲ್ಲಿಟ್ಟುಕೊಂಡರೆ ಯಾರನ್ನಾದರೂ ಮೋಸಪಡಿಸಬಹುದು. ಅದು ಇವಳಿಗೆ ಗೊತ್ತಾಗಿದೆ. ತನಗೆ ಮಾರು ಮಾರು ಅಂತ ಒಂದೇ ಹಟ ಇವಳದು. ನನ್ನ ವಸ್ತು, ನನ್ನ ಇಷ್ಟ ತಾನೇ ?" ಎಂದನು ಮಂದಮತಿ.

"ಅದೆಲ್ಲಾ ಇರಲಿ. ಈಗ ನನ್ನ ಎದುರು ಮೋಸಪಡಿಸಿ ತೋರಿಸು" ಎಂದನು ರಾಜ.

ಮಂದಮತಿ ಕುಲಾವಿಯನ್ನು ತನ್ನ ತಲೆಯಲ್ಲಿಟ್ಟುಕೊಂಡು ಮಡಕೆಯವಳನ್ನು ನೋಡಿ, "ನಿನ್ನ ಈ ಮಡಕೆಗಳನ್ನೆಲ್ಲಾ ಒಡೆದುಹಾಕು" ಎಂದನು.

ಕೂಡಲೇ ಆ ಹೆಂಗುಸು ತನ್ನ ತಲೆಯಲ್ಲಿದ್ದ ಚಿಕ್ಕ ದೊಡ್ಡ ಮಡಕೆಗಳನ್ನು ಒಂದೊಂದೇ ತೆಗೆದು ಸುಮ್ಮನೆ ನೆಲಕ್ಕೆ ಹೊಡೆದು ಒಡೆದು ಹಾಕಿದಳು. ರಾಜನು ಬೆರಗಾಗಿ ನೋಡಿದನು. ಅಂತಹ ಮಹಿಮೆಯ ಕುಲಾವಿ ಬೇರೆಯವರ ಹತ್ತಿರ ಇರುವುದು ತನಗೂ, ತನ್ನ ಮಗಳಿಗೂ ಒಳ್ಳೆಯದಲ್ಲವೆಂದು ಅವನಿಗೆ ತೋರಿತು. ಆದುದರಿಂದ ಅದನ್ನು ತನಗೇ ವಿಕ್ರಯಿಸಿಬಿಡುವಂತೆ ರಾಜನು ಅವನನ್ನು ಕೇಳಿದನು. ಸತ್ತರೂ ತಾನು ಆ ಕುಲಾವಿ ಮಾರುವುದಿಲ್ಲವೆಂದನು ಮಂದಮತಿ.

ರಾಜನು ಒಂದು ಚೀಲ ತುಂಬ ಮೊಹರಿಗಳನ್ನು ತರಿಸಿ ಅವನಿಗೆ ತೋರಿಸಿದ ಮೇಲೆ, ಅವನು ತಲೆ ತುರಿಸಿಕೊಳ್ಳುತ್ತ, ಹೀಗೆಂದನು :

"ಸರಿ. ಮಹಾರಾಜರು ಅಷ್ಟು ಕೇಳುವಾಗ, ಎಂದೋ ಒಂದು ದಿನ ಯಾರೋ ಒಬ್ಬರಿಗೆ ಮಾರಲೇಬೇಕಾಗಿ ಬಂದೀತು !" ಎನ್ನುತ್ತ ರಾಜನಿಗೆ ಕುಲಾವಿಯನ್ನು ಕೊಟ್ಟು, ಮೊಹರಿಗಳ ಚೀಲವನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು.



ಅವನು ಆ ಹಣದಿಂದ ಒಳ್ಳೊಳ್ಳೆಯ ದುಸ್ತುಗಳನ್ನು ಕೊಂಡುಕೊಂಡು ಮರುದಿನ ಅವುಗಳನ್ನು ಧರಿಸಿ ರಾಜನ ಬಳಿಗೆ ಹೋಗಿ, "ಪ್ರಭೂ, ತಮ್ಮ ಕುಮಾರಿಯನ್ನು ನನಗೆ ಕೊಟ್ಟು ಮದುವೆ ಮಾಡಲು ಇನ್ನು ಅಭ್ಯಂತರವಿಲ್ಲವಷ್ಟೆ ?" ಎಂದನು.

ರಾಜನಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಕುಲಾಯಿಯಲ್ಲಿ ಯಾವ ಮಹಿಮೆಯೂ ಇಲ್ಲವೆಂದು ಆಗಲೇ ಅವನಿಗೆ ಗೊತ್ತಾಗಿತ್ತು. ಕಡೆಗೆ ರಾಜನು, "ನೀನು ನನಗೆ ಹೇಳಿ ಮೋಸಮಾಡಬೇಕಿತ್ತು, ಹಾಗೆ ಮಾಡಲಿಲ್ಲ. ನಾಳೆ ಬೆಳಿಗ್ಗೆ ಮಂತ್ರಿಯನ್ನು ಬಲಾತ್ಕಾರವಾಗಿ ನನ್ನ ಬಳಿಗೆ ಕರೆದು ತರಲು ಸಾಧ್ಯವಾದರೆ, ನೀನು ನಿಜವಾಗಿಯೂ ಬುದ್ಧಿವಂತನೆಂದು ನಂಬುತ್ತೇನೆ " ಎಂದನು,

"ಅಪ್ಪಣೆ !" ಎಂದು ಮಂದಮತಿ ಹೊರಟು ಹೋದನು. ಮರುದಿನ ಮಂತ್ರಿ ತನ್ನ ಮನೆಯಲ್ಲಿದ್ದು, ಮನೆಯ ಸುತ್ತಲೂ ನೌಕರರನ್ನು ಕಾವಲಿಟ್ಟು, ಮಂದಮತಿ ಅಲ್ಲಿಗೆ ಬಂದರೆ, ಹಿಡಿದು ಕಟ್ಟಿಹಾಕಿ ಚೆನ್ನಾಗಿ ಹೊಡೆಯಬೇಕೆಂದು ಹೇಳಿದ್ದನು.

ಅಷ್ಟರೊಳಗೆ ಮಂದಮತಿ ಮಾರುವೇಷ ಹಾಕಿಕೊಂಡು, ಒಂದು ಗೋಣೀ ಚೀಲದೊಳಗೆ ತೂರಿ, ಮಂತ್ರಿಯ ಮನೆಯ ಸಮೀಪಕ್ಕೆ ಹೊರಳುತ್ತಾ ಬಂದನು. ಅದನ್ನು ನೋಡಿ ನೌಕರರು ಹತ್ತಿರ ಬಂದು, "ಏಯ್, ಯಾರೋ ನೀನು ?" ಎಂದರು.

"ಷ್ ! ಮಾತಾಡಬೇಡಿ !" ಎಂದನು ಮಂದಮತಿ.

ಭಟರು ಈ ಸಮಾಚಾರವನ್ನು ಮಂತ್ರಿಯೊಂದಿಗೆ ಹೇಳಿದರು. ಮಂತ್ರಿ ಗಡಿಬಿಡಿಯಿಂದ ಹೊರಗೆ ಬಂದು ಚೀಲದ ಕಡೆಗೆ ನೋಡಿ, "ಯಾರೋ ನೀನು ? " ಎಂದು ಕೇಳಿದರು.

" ಷ್ ! ಮಾತಾಡದಿರೀ ಅಂದ್ರೆ ! ಇದು ಜ್ಞಾನ ಚೀಲ. ನನಗೆ ಅನೇಕ ವಿಷಯಗಳನ್ನು ಉಪದೇಶಿಸುತ್ತಿದೆ ! " ಎಂದನು ಮಂದಮತಿ ಗೋಣಿಯೊಳಗೇ.

" ಎಲ್ಲಿ ? ಅದು ಹೇಳುವ ಸಂಗತಿಯಲ್ಲಿ ಒಂದನ್ನು ಹೇಳು...." ಎಂದನು ಮಂತ್ರಿ.

" ನಿನ್ನೆ ಮಹಾರಾಜರನ್ನು ಮೋಸಪಡಿಸಿದ ದುಷ್ಟನು, ನಿಮ್ಮ ಮನೆಗೆ ಹದಿನೇಳು ಮಂದಿ ಯೋಧರೊಂದಿಗೆ ಬಂದು ನಿಮ್ಮನ್ನು ಹಿಡಿಯುತ್ತಾನಂತೆ " ಎಂದನು ಮಂದಮತಿ.

" ಹಾಗಾದರೆ ನಾನೇನು ಮಾಡಬೇಕಂತೆ ? " ಎಂದು ಕೇಳಿದನು ಮಂತ್ರಿ ಗಾಬರಿಯಾಗಿ.

" ನೀವೇ ಚೀಲವನ್ನು ಕೇಳಬೇಕು " ಎಂದನು ಮಂದಮತಿ.

ಮಂತ್ರಿ ಚೀಲವನ್ನು ಬಿಡಿಸಿ ಅದರೊಳಗಿದ್ದವನನ್ನು ಹೊರಗೆ ಬರಿಸಿದನು. ಆಮೇಲೆ ಮಂತ್ರಿ ಚೀಲದೊಳಗೆ ಹೊಕ್ಕು ಕುಳಿತು, " ನಾನೇನು ಮಾಡಬೇಕು ? " ಎಂದು ಚೀಲವನ್ನು ಕೇಳಿದನು.

ಅಷ್ಟರೊಳಗೆ ಮಂದಮತಿ, ಚೀಲಕ್ಕೆ ಕಿವಿಗೊಟ್ಟು ಕೇಳಿದಂತೆ ನಟಿಸಿ, " ಓಹೋ ! ಹಾಗೇನು ? ಇದೋ

ಹೊರುತ್ತೇನೆ" ಎಂದು ಚೀಲದ ಬಾಯಿ ಬಿಗಿದು ಎತ್ತಿ ತನ್ನ ಹೆಗಲಲ್ಲಿಟ್ಟುಕೊಂಡು ಅಲ್ಲಿಂದ ಹೋಗಿ ರಾಜನ ಇದಿರಿನಲ್ಲಿ ಆ ಚೀಲವನ್ನಿಟ್ಟನು.

"ಈ ಪರೀಕ್ಷೆಯಲ್ಲಿ ಗೆದ್ದೆಯಾ ? ನಾಳೆ ನೀನು ಬಂದು ಅಂತಃಪುರದಲ್ಲಿರುವ ನನ್ನ ಕುಮಾರಿಯನ್ನು ಗುರುತಿಸು. ಆಮೇಲೆ ಅವಳೊಂದಿಗೆ ಮದುವೆ. ನೆನಪಿರಲಿ. ನನ್ನ ಕುಮಾರಿಗೆ ಎಂಬತ್ತು ಮಂದಿ ಪರಿಚಾರಿಕೆಯರಿದ್ದಾರೆ. ಅವರಲ್ಲಿ ನನ್ನ ಮಗಳನ್ನು ನೀನೇ ಗುರುತಿಸಬೇಕು. ಯಾರೂ ತೋರಿಸಲಾರರು. ನಿನಗೆ ನನ್ನ ಕುಮಾರಿಯನ್ನು ಗುರುತಿಸಲಾಗದೆ ಹೋದರೆ ನಿನಗೆ ಮದುವೆ ಇಲ್ಲದೆ ಹೋಗುವುದಷ್ಟೇ ಅಲ್ಲ, ಕೊರಡೇ ಏಟುಗಳೂ ಬೀಳುತ್ತವೆ ! ತಿಳಿಯಿತೆ ? " ಎಂದನು ರಾಜ.

ಮರುದಿನ ಮಂದಮತಿ ಒಂದು ಸಣ್ಣ ಚೀಲದಲ್ಲಿ ಒಂದು ಇಲಿಯನ್ನು ಇಟ್ಟುಕೊಂಡು ಅಂತಃಪುರಕ್ಕೆ ಹೋದನು.

ಅವನು ಹೋದಾಗ ಎಂಬತ್ತೊಂದು ಮಂದಿ ಕನ್ಯೆಯರು ಒಂದೇ ವಿಧವಾದ ಬಟ್ಟೆಬರೆ ಆಭರಣಗಳಿಂದ ಸಾಲಾಗಿ ಕುಳಿತುಕೊಂಡಿದ್ದರು. ರಾಜನೂ ಅಲ್ಲಿ ಸುಮ್ಮನೆ ಕುಳಿತಿದ್ದನು.

"ಇವರಲ್ಲಿ ನನ್ನ ಮಗಳನ್ನು ಗುರುತಿಸು!" ಎಂದನು ರಾಜ ಮಂದಮತಿಯನ್ನು ನೋಡಿದ ಕೂಡಲೇ.

ಮಂದಮತಿ ತನ್ನ ಕೈಯಲ್ಲಿದ್ದ ಚೀಲವನ್ನು ಬಿಡಿಸಿ ಆ ಕನ್ಯೆಯರ ಮೇಲೆ ಎಸೆದನು. ಆಗ ಹಾರಿದ ಇಲಿಯಿಂದ ಕನ್ಯೆಯರೆಲ್ಲಾ ಕಿಟ್ಟನೆ ಕಿರಿಚಿ ಚೆಲ್ಲಾಪಿಲ್ಲಿ ಓಡಾಡಿದರು. ಆದರೆ ಅವರಲ್ಲಿ ಒಬ್ಬಳು ಮೂರ್ಛೆ ಹೋಗಿದ್ದಳು. ಕೂಡಲೇ ಉಳಿದವರು ಇಲಿಯನ್ನು ಮರೆತು ಮೂರ್ಛೆ ಹೋದ ಕನ್ಯೆಗೆ ಉಪಚಾರ ಮಾಡತೊಡಗಿದರು.

ಮಂದಮತಿ ಪರಮಾನಂದದಿಂದ, ನಗುತ್ತಾ ರಾಜನ ಕಡೆಗೆ ನೋಡಿ, ಮೂರ್ಛೆ ಹೋದವಳನ್ನು ತೋರಿಸಿ, "ಇವಳೇ ನಿಮ್ಮ ಕುಮಾರಿ ! " ಎಂದನು.

ರಾಜನು ಮತ್ತೇನೂ ಮಾತಾಡದೆ ತಲೆದೂಗಿ ಮದುವೆಗೆ ಮುಹೂರ್ತವಿಡಿಸಿದನು. ಆಗ ಮಂದಮತಿ ರಾಜನೊಂದಿಗೆ, "ನಾನು ಮಂದಮತಿ ಎಂಬ ಹೆಸರು ಪಡೆಯಲು ಕಾರಣ, ಚಿಕ್ಕಂದಿನಲ್ಲೇ ಒಬ್ಬ ಮಹಾತ್ಮನು ಸ್ವಪ್ನದಲ್ಲಿ ಇದೇ ರೂಪದ ಕುಮಾರಿಯನ್ನು ನನಗೆ ತೋರಿಸಿ, ನೀನು ರಾಜನ ಅಳಿಯನಾಗುವಿ ಎಂದಿದ್ದ. ಅಂದಿನಿಂದ ನಾನು ಯಾವ ಕೆಲಸಕ್ಕೂ ಹೋಗದೆ, ಮಂದಮತಿ ಅನ್ನಿಸಿಕೊಂಡೆನು. ಈಗ ಕನಸು ನಿಜವಾಯಿತು ! " ಎಂದನು.

ರಾಜಕುಮಾರಿಯೊಂದಿಗೆ ಅವನ ಮದುವೆಯಾದ ಮೇಲೆ, ಎಲ್ಲರಿಗಿಂತ ಅವನೇ ಹೆಚ್ಚು ಬುದ್ಧಿವಂತನೆಂಬುದು ಅನೇಕ ಬಾರಿ ರುಜುವಾತಾಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





P. V. Subramaniam                M. C. Morabad

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜನವರಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ನವೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಬೆಕ್ಕಿಗೇನು ಗೊತ್ತು ಪುಸ್ತಕದ ಮಹತ್ತು ?

ಎರಡನೇ ಫೋಟೋ : ಜ್ಞಾನ ಭಂಡಾರವೆಂದು ನನಗೆ ಗೊತ್ತು.

ಕಳುಹಿಸಿದವರು : ಸುಶೀಲ್ ಹಂದಿ ಗೋಲ್, ಕೊಟಗೆರಿ ಸ್ಟ್ರೀಟ್, ಹಳೇ ಹುಬ್ಬಳ್ಳಿ

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಕಾಲಿಫೋರ್ನಿಯಾದಲ್ಲಿ ೪,೬೦೦ ವರ್ಷ ದಾಟಿದ ಈ ವೃಕ್ಷವು ದೇವದಾರು ಜಾತಿಗೆ ಸೇರಿದುದು. ೨. ಅಶೋಕ ಚಕ್ರವರ್ತಿಯ ಮಗಳು ಸಂಘ ಮಿತ್ರ ಗಯಾದಲ್ಲಿರುವ ಬೋಧಿ ವೃಕ್ಷದಿಂದ ಕಸಿಕಟ್ಟಿ ತೆಗೆದುಕೊಂಡು ಹೋಗಿ ನೆಟ್ಟ ವೃಕ್ಷ. ಇದು ಶ್ರೀಲಂಕಾದ ಅನುರಾಧಾಪುರದಲ್ಲಿದೆ. ೩. ಮೆಕ್ಸಿಕೋದ ಒಕ್ಸೋಕೋದಲ್ಲಿದೆ. ತಮಾಲ ವೃಕ್ಷ ಜಾತಿಗೆ ಸೇರಿದ ಈ ವೃಕ್ಷದ ಕಾಂಡವು ನೂರಹತ್ತು ಅಡಿ ಸುತ್ತಳತೆಯುಳ್ಳದು. ೪. ಬಿದಿರಿನ ಜಾತಿಯ ಕೆಲವು ಮರಗಳು ದಿನಕ್ಕೆ ಮೂವತ್ತಾರು ಅಂಗುಲ ಬೆಳೆಯುತ್ತವೆ. ೫. ಪೆನ್ಸಲ್ವೇನಿಯಾದ ಜೂನಿಯಾಟಾ ನದೀ ತೀರದಲ್ಲಿರುವ ವೃಕ್ಷವು ನೂರು ಎಕರೆಗಳಷ್ಟು ಜಾಗವನ್ನು ವ್ಯಾಪಿಸಿಕೊಂಡಿದೆ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




೮

[ಪಿಂಗಳನು ಎರಡನೇ ಸಾರಿ ಪಾಳು ದೇಗುಲದೊಳಗೆ ಪ್ರವೇಶಿಸಿ, ಅಲ್ಲಿರುವ ದುಷ್ಟ ಶಕ್ತಿಗಳನ್ನು ಜಯಿಸಿ, ಮಹಾಮಾಯನ ಸಮಾಧಿಯನ್ನು ತಲಪಿದನು. ಅನಂತರ ಮಹಾಮಾಯನ ಬೆರಳ ಉಂಗುರವನ್ನೂ, ವಜ್ರಗಳ ಹಿಡಿಯ ಖಡ್ಗವನ್ನೂ, ಭೂಗೋಳವನ್ನೂ ತೆಗೆದುಕೊಂಡು ಸುರಕ್ಷಿತನಾಗಿ ಹೊರಗೆ ಬಂದನು. ಅಷ್ಟರಲ್ಲಿ ನದೀ ಗರ್ಭದೊಳಗಿನಿಂದ ದೊಡ್ಡ ಧ್ವನಿಯೊಂದಿಗೆ ನೀರಿನ ಧಾರೆ ಮೇಲೆ ಚಿಮ್ಮಿತು.]

ಆ ನೀರಿನ ಧಾರೆಯನ್ನು ನೋಡಿ ಪದ್ಮಪಾದನು ಹೆದರಿ ಹಿಂದೆ ಹಾರಿದನು. ಅಷ್ಟು ದೊಡ್ಡ ಮಾಂತ್ರಿಕನಾದ ಪದ್ಮಪಾದನೇ ಬೆದರಿ ಬಿದ್ದು ಹಿಂದೆ ಹಾರಿದುದನ್ನು ನೋಡಿ ಪಿಂಗಳನಿಗೆ ಅತ್ಯಾಶ್ಚರ್ಯವಾಯಿತು. ಅವನು ವಿಚಿತ್ರವಾಗಿ ಪದ್ಮಪಾದನನ್ನೊಮ್ಮೆ ನೋಡಿದರೂ, ನಿಂತಲ್ಲಿಂದ ಕದಲಲಿಲ್ಲ. ಅವನು ದೊಡ್ಡ ಅದ್ಭುತವನ್ನು ನೋಡುವವನಂತೆ ನೀರಧಾರೆ ಹಾರಿ ಚಿಮ್ಮುವ ಚೆಂದವನ್ನು ನೋಡುತ್ತ "ಅಯ್ಯಾ ಪದ್ಮಪಾದರೇ! ನಮಗೀಗ ಏನು ಇದಿರಾಗಿದೆ? ಬೇಕಾದರೆ ಪ್ರಪಂಚವನ್ನೇ ದಾಸೋಹಂ ಅನಿಸಿಕೊಳ್ಳುವಂತಹ ಮಹಾ ಮಹಾ ಶಕ್ತಿಗಳು ನಮ್ಮ ಹತ್ತಿರ ಇರುವುವಷ್ಟೆ? ಹಾಗಿರುವಾಗ ಕೇವಲ ಈ ನೀರು ಹಾರುವುದನ್ನು ನೋಡಿ ನಾವು ಭಯಪಡಬೇಕಾದ ಅಗತ್ಯವೇನಿದೆ? ಹಾಗೇನಾಯಿತು?" ಎಂದು ಕೇಳಿದನು.

ಪಿಂಗಳನ ಪ್ರಶ್ನೆ ಕೇಳಿದ ಮೇಲೆ ಪದ್ಮಪಾದನು ಸ್ವಲ್ಪ ಮಟ್ಟಿಗೆ ಸ್ಥಿಮಿತಕ್ಕೆ ಬಂದವನಂತಾದನು. ಅವನು ಪಿಂಗಳನನ್ನು ನೋಡಿ, ಅಪ್ಯಾಯತೆಯಿಂದ ಅವನ ಭುಜವನ್ನು ತಟ್ಟುತ್ತ, "ಪಿಂಗಳಾ, ನಿನ್ನಂಥ ಯುವಕ ವೀರನು ನನ್ನ ಪಕ್ಕದಲ್ಲಿರುವಾಗ, ನಾನು



ಯಾವುದಕ್ಕೂ ಭಯಪಡಲಾರೆನು. ಯಾವ ಮಂತ್ರ ತಂತ್ರಗಳೊಂದೂ ತಿಳಿಯದಿರುವ ನೀನು ಪ್ರದರ್ಶಿಸಿದ ಸಾಹಸವೂ ನಿರ್ಭಯತೆಯೂ ಅಮೋಘವಾದುದು. ನಾನು ಆ ನದೀ ಗರ್ಭದಿಂದೇಳುವ ನೀರಿನ ಬುಗ್ಗೆಯನ್ನು ನೋಡಿ ಹೆದರಿದೆನೆಂದು ತಿಳಿಯಬೇಡ. ಆದರೆ..." ಎಂದು ಮತ್ತೆ ನೀರ ಬುಗ್ಗೆಯ ಕಡೆಗೆ ನೋಡಿದನು:

"ಸಂದೇಹಿಸುವಿರೇಕೆ ? ಏನು ಸಂಗತಿಯೋ ಹೇಳಿರಿ" ಎಂದನು ಪಿಂಗಳ.

ಪದ್ಮಪಾದನು ಕಿರುನಗೆ ತೋರಿಸಿ, "ನಾವೀಗ ಮಹಾಮಾಯನ ಎಲ್ಲಾ ಅದ್ಭುತ ಶಕ್ತಿಗಳನ್ನೂ ಪಡೆದಿದ್ದೇವೆ. ಆ ಕಾರಣದಿಂದ ಈ ಭಲ್ಲೂಕ ಪರ್ವತ ಪ್ರಾಂತದಲ್ಲಿ, ಇದಕ್ಕೆ ಮೊದಲು ಇಷ್ಟಾನುಸಾರವಾಗಿ ತಿರುಗುತ್ತಿದ್ದ ದುಷ್ಟ ಶಕ್ತಿಗಳೆಲ್ಲಾ ಬಲಹೀನವಾಗಬೇಕಿತ್ತು. ಆದರೆ ಹಾಗಾದಂತೆ ಕಾಣುವುದಿಲ್ಲ. ಅವು ಇನ್ನಿಷ್ಟು ಹೆಚ್ಚಿನ ಶಕ್ತಿಯಿಂದ ವಿಜೃಂಭಿಸುತ್ತಿವೆ. ಇದಕ್ಕೆ ಕಾರಣವೇನೆಂದು ಸರಿಯಾಗಿ ಅವಗಾಹನೆ ಆಗಲಿಲ್ಲ. ನೋಡಬೇಕಾಯಿತು. ಈಗ ಬರುವುದು ಬರಿಯ ನೀರು ಮಾತ್ರವೆಂದು ತಿಳಿಯಬೇಡ" ಎಂದನು.

ಪಿಂಗಳನಿಗೆ ಅದೆಲ್ಲಾ ಏನು ಗೊತ್ತು ? ತನಗೇನೂ ತಿಳಿಯದೆಂಬಂತೆ ತಲೆ ಬಾಗಿಸಿದನು. ಪದ್ಮಪಾದನು ಮತ್ತೇನೋ ಹೇಳಲಿರುವಾಗ, ನದಿಯ ನೀರಿನ ಮೇಲೆ ಅನೇಕ ಭೀಕರಾಕಾರಗಳು, ವಿವಿಧಾಯುಧಗಳನ್ನು ಧರಿಸಿ ವಿಕೃತ ಧ್ವನಿಯಿಂದ ಅರಚುತ್ತ ಕೋಲಾಹಲವನ್ನೇ ಪ್ರಾರಂಭಿಸಿದುವು. ಅವುಗಳೊಳಗೇ ಏನೋ ಕಲಹ !

ಆ ದೃಶ್ಯವನ್ನು ನೋಡಿದ ಕೂಡಲೇ ಪಿಂಗಳನಿಗೆ ಭಯವೆದ್ದಿತು. ಸರ್ವಾಂಗವೂ ಬೆವರಿ ನೀರಾಯಿತು. "ಅಯ್ಯಾ ಪದ್ಮಪಾದರೇ ! ಈಗ ಏನು ದಾರಿ ? ನನ್ನ ಜೀವಿತದ ಯಾವ ಸ್ವಪ್ನದಲ್ಲಿ ಕೂಡಾ ಇಂತಹ ವಿಕಾರಾಕಾರಗಳನ್ನು ನೋಡಿರಲಿಲ್ಲ. ಇವುಗಳ ಮೇಲೆ ನಾವು ಸಂಪಾದಿಸಿದ ಮಹಾಶಕ್ತಿಯಿಂದ ತುಂಬಿದ ಆಯುಧಗಳನ್ನು ಪ್ರಯೋಗಿಸಬೇಕಾಗಿ ಬರುತ್ತದೆಯೆ ?" ಎಂದನು ಏನೋ ಸಂದೇಹದಿಂದ.

ಪದ್ಮಪಾದನು ಸ್ವಲ್ಪ ಹೊತ್ತು ನೆಲ ನೋಡಿ ಚಿಂತಿಸಿ "ಊಹೂಂ" ಎಂದು ತಲೆಯಾಡಿಸಿ, ಪಿಂಗಳನನ್ನು ನೋಡಿ, "ಇಷ್ಟರವರೆಗೂ ಇವುಗಳನ್ನು ಬಹಳ ಭದ್ರವಾಗಿರಿಸಿಕೊಂಡಿದ್ದ ಮಹಾಮಾಯನ ಸಮಾಧಿಯನ್ನು ಭೇದಿಸಿ ಅದನ್ನು ಪ್ರವೇಶಿಸಿದ್ದೇವೆ. ಅವನ ಶಕ್ತಿಗಳು ಕೂಡಾ ಈಗ ನಮ್ಮ ವಶಕ್ಕೆ ಬಂದಿದೆ. ಆದುದರಿಂದ ಈ ದುಷ್ಟ ಪಿಶಾಚ ಗಣಗಳಿಗೆ ನಾಯಕನೇ ಇಲ್ಲದಂತಾಗಿದೆ, ಅವುಗಳೆಲ್ಲಾ ಒಬ್ಬ ನಾಯಕನಿಗಾಗಿ ಹೋರಾಡ ತೊಡಗಿವೆ. ನಾವು ಈಗ ಒಂದು ಕೆಲಸ ಮಾಡಿದರೆ ಚೆನ್ನಾಗಿರುತ್ತದೆ. ಆ ಭಲ್ಲೂಕಕೇತುವಿನ ಸಂಗತಿ ನೀನು ಮರೆಯಲಿಲ್ಲ ವಷ್ಟೆ ?" ಎಂದನು.



"ಭಲ್ಲೂಕಕೇತುವೇ! ಅವನನ್ನು ಹೇಗೆ ಮರೆಯಲು ಸಾಧ್ಯ? ಅವನು ಒಂದು ಕಾಲದಲ್ಲಿ ಈ ಪರ್ವತ ಪ್ರಾಂತಕ್ಕೆಲ್ಲಾ ಅಧಿಪತಿಯಾಗಿದ್ದವನೆಂದೂ ಹೇಳಿದ್ದಾನೆ. ನಾವು ಹಿಂದಿರುಗಿ ಹೋಗುವಾಗ ಅವನಿಗೆ ಲೋಹ ಶೃಂಖಲೆಯಿಂದ ಬಿಡುಗಡೆ ಮಾಡುತ್ತೇವೆಂತಲೂ ಮಾತು ಕೊಟ್ಟಿದ್ದೇವೆ. ಈಗ ಅವನಿಗೂ ಇದಕ್ಕೂ ಏನು ಸಂಬಂಧವೆನ್ನುವಿರಿ?" ಎಂದನು ಪಿಂಗಳ.

"ಹಾಗೆ ಕೇಳು, ಸಂಬಂಧವಿದೆ. ನಾವು ಅವನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಕ್ಕೆ ಇದೇ ತಕ್ಕ ಸಮಯವಾಗಿದೆ. ಈ ಭಲ್ಲೂಕ ಪ್ರಾಂತದ ಕಾಡು ಬೆಟ್ಟಗಳಿಗೆ ಅಧಿಪತಿ ಎಂದು ಯಾರೂ ಇಲ್ಲದೆ ಹೋದರೆ, ಈ ಚಿಕ್ಕ ದೊಡ್ಡ ರಕ್ಕಸ ಭೂತಗಳು ತಮ್ಮೊಳಗೆ ತಾವು ಜಗಳಾಡಿ, ಈ ಪರಗಣೆಯ ಊರು ಕೇರಿ ಪಟ್ಟಣಗಳನ್ನೆಲ್ಲಾ ಅಲ್ಲಕಲ್ಲೋಲ ಮಾಡ ಬಲ್ಲಂಥವು. ಆದುದರಿಂದ ನಾವು ಮತ್ತೆ ಆ ಭಲ್ಲೂಕ ಕೇತುವಿಗೇ ಈ ಪ್ರಾಂತದ ಆಧಿಪತ್ಯವನ್ನು ಕೊಟ್ಟು ಬಿಡೋಣ. ಇವುಗಳಿಗೆಲ್ಲ ಅವನೇ ತಕ್ಕವನು, ಅಷ್ಟು ಮಾಡಿದರೆ ಇಲ್ಲಿಯ ಕೆಲಸ ಮುಗಿದಂತೆ" ಎಂದನು ಪದ್ಮಪಾದ.

"ಹೌದು. ಅದು ಬಹಳ ಒಳ್ಳೆಯ ಯೋಚನೆ. ಅವನ ರೂಪಾಕಾರಗಳು ಅದಕ್ಕೆ ತಕ್ಕ ಹಾಗೇ ಇವೆ. ನಮಗೂ ಅದರಿಂದೇನೂ ಕೆಡುಕಾಗದು. ಹಾಗೆಯೇ ಮಾಡಿಬಿಡಿರಿ" ಎಂದನು ಪಿಂಗಳ.

"ಹಾಗಾದರೆ ನೀನು ಕೂಡಲೇ ಹೊರಟುಬಿಡು. ಈ ಅಡವಿಯಲ್ಲಿರುವ ಆ ಕೊಳದ ಪ್ರದೇಶ ನಿನಗೆ ಗೊತ್ತಿದೆ ತಾನೇ? ಅವನನ್ನು ಬಂಧಮುಕ್ತ ಮಾಡಿ, ಇಲ್ಲಿಗೆ ಕರೆದುಕೊಂಡು ಬಾ. ಮುಂದಿನ ಕ್ರಮ ನಾನು ನೋಡಿಕೊಳ್ಳುತ್ತೇನೆ" ಎಂದನು ಪದ್ಮಪಾದ.

"ಒಳ್ಳೇದು. ಬಹಳ ಒಳ್ಳೇ ಆಲೋಚನೆ. ಈಗಲೇ ಹೋಗಿ ಕರೆದುಕೊಂಡು ಬರುತ್ತೇನೆ" ಎಂದನು ಪಿಂಗಳ.

ಪಿಂಗಳನು ಉತ್ಸಾಹದಿಂದ ಹೊರಡಲು ಸಿದ್ಧ ನಾದನು. ಪದ್ಮಪಾದನು ತನ್ನ ನಡುವಿನಲ್ಲಿದ್ದ ಮಹಾಮಾಯನ ವಜ್ರಗಳ ಹಿಡಿಯ ಖಡ್ಗವನ್ನು ಪಿಂಗಳನಿಗೆ ಕೊಟ್ಟು, "ನಿನಗೆ ವಾಹನವಾಗಿ ಆ ಪಿಶಾಚ ಗಾರ್ದಭವಿರುತ್ತದೆ. ಈ ಕತ್ತಿಯ ಸಹಾಯ ದಿಂದ ನೀನು ಭಲ್ಲೂಕಕೇತುವನ್ನು ಸಮೀಪಿಸದೆಯೇ, ತುಸು ದೂರದಲ್ಲಿದ್ದೇ ಅವನನ್ನು ಬಂಧಿಸಿರುವ ಕಬ್ಬಿಣದ ಸಂಕಲೆಗಳನ್ನು ಮುರಿದು ಹಾಕಬಹುದು. ಇಕೋ, ನೋಡು ವಾಹನವನ್ನು!" ಎಂದು ಗದೆ ಯನ್ನು ಗಾಳಿಯೊಳಗೆ ತಿರುವಿದನು.

ಕೂಡಲೇ ಭೂಮಿಯನ್ನು ಭೇದಿಸಿಕೊಂಡು ಅದ ರೊಳಗಿನಿಂದ ಭಯಂಕರ ಧ್ವನಿಯಿಂದ ಗಾಂಡ್ರಿಸುತ್ತ ಪಿಶಾಚ ಗಾರ್ದಭವು ಹೊರಗೆ ಹಾರಿತು.

ಪಿಂಗಳನು ಮಹಾ ಉತ್ಸಾಹದಿಂದ ಮಹಾ ಮಾಯನ ಕತ್ತಿಯನ್ನು ಹಿಡಿದುಕೊಂಡು ಪಿಶಾಚ ಗಾರ್ದಭದ ಮೇಲೆ ಹಾರಿ ಕುಳಿತನು. ಕೂಡಲೇ

ಗಾರ್ದಭವು ಆಕಾಶವೇಲೆ ಎದ್ದು, ಬೆಟ್ಟಗಳನ್ನೂ, ನದಿಗಳನ್ನೂ, ಕಾಡು ಮೇಡು ತಿಟ್ಟುಗಳನ್ನೂ ದಾಟಿಕೊಂಡು ಹೋಯಿತು. ಸ್ವಲ್ಪ ಹೊತ್ತಿನೊಳಗೆ ಪಿಂಗಳನು ಭಲ್ಲೂಕಕೇತು ಬಂಧಿಸಲ್ಪಟ್ಟಿರುವ ಕೊಳದ ಪ್ರಾಂತವನ್ನು ತಲುಪಿದನು.

ಖಡ್ಗಪಾಣಿಯಾಗಿ ಕತ್ತೆಯ ಮೇಲೇರಿಕೊಂಡು ಬರುವ ಪಿಂಗಳನನ್ನು ನೋಡಿದ ಕೂಡಲೇ ಭಲ್ಲೂಕಕೇತು, ದೊಡ್ಡ ದನಿಯಿಂದ ನರಳು ದನಿ ತೆಗೆಯುತ್ತ, "ಓಹೋಯ್! ಮಹಾ ಪ್ರಭೂ! ದೇವ್ರೂ! ಗಾರ್ದಭೇಂದ್ರರೇ! ನನ್ನನ್ನು ರಕ್ಷಿಸಿರೋ! ಈ ಕಬ್ಬಿಣದ ಸಂಕಲೆಗಳನ್ನು ಮುರಿದು ಹಾಕಿ ಪುಣ್ಯ ಕಟ್ಟಿಕೊಳ್ಳಿರೋ!..." ಎಂದು ಮುಂತಾಗಿ ಕೂಗ ತೊಡಗಿದನು. ಅವನ ಕೂಗು ನಾಲ್ಕು ಸುತ್ತಲೂ ಪ್ರತಿಧ್ವನಿ ಕೊಡುತ್ತಿದ್ದಿತು.

ಪಿಂಗಳನು ನಗುತ್ತಾ, ಕೊಳದ ಬದಿಯಲ್ಲೇ ಕತ್ತೆಯ ಮೇಲಿನಿಂದ ಇಳಿದು, "ಇನ್ನು ಬಾಯಿ ಮುಚ್ಚಿಕೋಯ್ಯಾ ಭಲ್ಲೂಕಕೇತೂ! ಯಾವನೋ ದೇವನೆಂದುಕೊಂಡು ನನಗೆ ಗಾರ್ದಭೇಂದ್ರನೆಂಬ ಬಿರುದು ಕೊಡುವೆಯಾ? ನಾನು ಗಾರ್ದಭೇಂದ್ರನೂ ಅಲ್ಲ, ಜಂಬುಕೇಂದ್ರನೂ ಅಲ್ಲ. ನಾನೊಬ್ಬ ಸಾಧಾರಣ ಮನುಷ್ಯನೇ. ಈ ಮೊದಲು ನೀನು ಒಂದು ಸಾರಿ ನನ್ನನ್ನು ನೋಡಿರುವುದನ್ನು ಮರೆತೆಯಾ? ನನ್ನ ಹೆಸರು ಪಿಂಗಳ, ಜಾಲರಿ ಪಿಂಗಳ. ನಿನ್ನ ಹತ್ತಿರ ಕೆಲಸವಿದ್ದುದಕ್ಕೇ ಬಂದೆನು" ಎಂದನು.

"ಆಹಾ! ನೀವು ಪಿಂಗಳರೇನು? ಹೌದೌದು, ಈಗ ನೆನಪಿಗೆ ಬಂತು. ಮಹಾಮಾಯನ ಸಮಾಧಿಯ ಮೇಲಕ್ಕೆ ದಾಳಿ ಮಾಡಲು ಹೊರಟ ಆ ನಮ್ಮ ಮಹಾ ಮಂತ್ರವಾದಿ ನಿಮಗೆ ಗುರುವಲ್ಲವೇ?" ಎಂದನು ಭಲ್ಲೂಕಕೇತು.

"ಸರಿಯಾಗಿ ಹೇಳಿದೆ. ನಿನ್ನ ನೆನಪಿನ ಶಕ್ತಿ ಮೆಚ್ಚಬೇಕಾದ್ದೇ" ಎಂದನು ಪಿಂಗಳ.

"ಅಯ್ಯಾ ಪಿಂಗಳ ಪ್ರಭೂ! ಆ ಮಂತ್ರವೇತ್ತರು ಸುಖವಾಗಿರುವರೇ? ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಲು ಸಾಧ್ಯವಾಯಿತೇ? ಕಾರ್ಯವು



ಜಯವಾಯಿತೇ? ಅವರನ್ನು ಬಿಟ್ಟು ನೀವೊಬ್ಬರೇ ಹೇಗೆ ಬರಲಾಯಿತು ?" ಎಂದು ಕೇಳಿದನು ಭಲ್ಲೂಕಕೇತು.

"ಆ ಸಮಾಧಿಯೊಳಗೆ ಪ್ರವೇಶಿಸಿದವನು ನಾನು. ಇಕೋ ನೋಡು. ಆ ಮಹಾಮಾಯನ ಮಹಾ ಮಂತ್ರಶಕ್ತಿಯನ್ನೊಳಗೊಂಡ ಖಡ್ಗ !" ಎಂದು ಪಿಂಗಳನು ತನ್ನ ಕೈಯಲ್ಲಿದ್ದ ವಜ್ರಗಳ ಹಿಡಿಯ ಖಡ್ಗವನ್ನು ಝಳಪಿಸಿ, ಅದರ ಮೊನೆಯನ್ನು ಭಲ್ಲೂಕ ಕೇತುವಿನ ಶರೀರಕ್ಕೆ ನೇರಾಗಿ ಗುರಿಯಿಟ್ಟು ಅತ್ತಿತ್ತ ಆಡಿಸಿದನು.

ಮರುಕ್ಷಣದಲ್ಲಿ ಕಣ್ಣು ಕುಕ್ಕುವಂತಹ ಕಾಂತಿರೇಖೆಗಳು ಮಹಾ ವೇಗದಿಂದ ಆ ಕತ್ತಿಯ ಮೊನೆಯಿಂದ ಹೊರಟು, ಭಲ್ಲೂಕಕೇತುವನ್ನು ಬಂಧಿಸಿದ್ದ ಕಬ್ಬಿಣದ ಸಂಕಲೆಗೆ ತಾಗಿದುವು. ಅದೇ ಕ್ಷಣದಲ್ಲಿ ಆ ಕಬ್ಬಿಣದ ಸಂಕಲೆ ಒಣ ಹಗ್ಗದಂತೆ ಭಗ್ಗನೆ ಉರಿದು ಮಸಿ ಬೂದಿ ಕಣಗಳಾಗಿ ಹಾರಿಹೋಯಿತು.

ಭಲ್ಲೂಕಕೇತು ಸಂತೋಷಾತಿಶಯದಿಂದ ಹಾಯೆಂದು ಕೂಗಿದನು. ಆಮೇಲೆ ತನ್ನ ಮಹಾ ಕಾಯವನ್ನು ಒಂದು ಸಾರಿ ಕೊಡರಿಕೊಂಡು ಮೈ ಮುರಿದು ಎದ್ದು ನಿಂತು, ಮತ್ತೊಮ್ಮೆ ಚೆನ್ನಾಗಿ ಮೈಮುರಿದನು. ಅನಂತರ ಅವನು ಕೃತಜ್ಞತೆ ಸೂಸುವ ಕಣ್ಣುಗಳಿಂದ ಪಿಂಗಳನ ಸಮೀಪ ಬಂದು, "ಪ್ರಭೂ ! ನೀವು ಬಂದು ನನ್ನನ್ನು ಬಂಧಮುಕ್ತ ಮಾಡಿ, ಬಹಳ ಕಾಲದಿಂದ ನಾನು ಪಡುತ್ತಿರುವ ನರಕಯಾತನೆಯಿಂದ ತಪ್ಪಿಸಿದಿರಿ. ನಿಮ್ಮ ದಯ ದಿಂದ ನನಗೆ ಸ್ವಾತಂತ್ರ್ಯ ಸಿಕ್ಕಿತು. ಈ ಗಳಿಗೆ ಯಿಂದ ನಾನು ನಿಮಗೆ ದಾಸನು. ಏನು ಮಾಡ ಬೇಕೆಂದು ಅಪ್ಪಣೆಯಾಗಲಿ " ಎಂದನು.

"ನಾವು ಈಗಲೇ ಇಲ್ಲಿಂದ ಪದ್ಮಪಾದರ ಬಳಿಗೆ ಹೋಗಬೇಕು. ಮಹಾಮಾಯನು ತನ್ನ ಶಕ್ತಿಯನ್ನು ಕಳೆದುಕೊಂಡ ಮೇಲೆ ಭಲ್ಲೂಕ ಪರ್ವತಗಳ ಕಣಿವೆ ಯಲ್ಲಿರುವ ಚಿಕ್ಕವೂ ದೊಡ್ಡವೂ ಆದ ಪಿಶಾಚ ಗಣ ಗಳಿಗೆಲ್ಲಾ ನಾಯಕನಿಲ್ಲದೆ ಬಹಳ ಗಲಾಟೆ ಎದ್ದಿದೆ. ನಾನು ನೀನು ಎಂದು ಪಿಶಾಚಿಗಳೆಲ್ಲ ಜಗಳಾಡಿ ಕೊಳ್ಳುತ್ತಿದ್ದಾವೆ. ನಿನ್ನಂಥ ಮಹಾ ಶಕ್ತಿಶಾಲಿಯನ್ನು





ಮತ್ತು ಆ ಕ್ಷುದ್ರಜೀವಿಗಳಿಗೆ ನಾಯಕನನ್ನಾಗಿ ಮಾಡಿಬಿಡಬೇಕೆಂಬುದು ಪದ್ಮಪಾದರ ಅಭಿಪ್ರಾಯ. ಹಾಗೆ ಮಾಡದಿದ್ದರೆ ಪಿಶಾಚಿಗಳು ಕೇಳುವವರಿಲ್ಲದೆ, ಊರವರನ್ನೂ ರಾಜ್ಯವನ್ನೂ ವಂಚಿಸಿ ಹಂಚಿಕೊಂಡು, ಈ ಪ್ರಾಂತಕ್ಕೆಲ್ಲಾ ನಾನಾ ಬಗೆಯ ಕಲ್ಮಶ ಬರುವ ಹಾಗೆ ಮಾಡಬಹುದು" ಎಂದನು.

ಪಿಂಗಳನ ಮಾತು ಕೇಳಿ ಭಲ್ಲೂಕಕೇತು ಹೆದರಿ ಗಡಗಡ ನಡುಗುತ್ತ, ಎರಡು ಕೈಗಳನ್ನೂ ಜೋಡಿಸಿ ಪಿಂಗಳನಿಗೆ ಬಾಗಿ ನಮಸ್ಕಾರ ಮಾಡುತ್ತ, "ಬೇಡವೇ ಬೇಡ ಪ್ರಭೂ! ಇನ್ನು ನನಗೆ ಈ ಭೂತಪಿಶಾಚ ಗಣಗಳ ಮೇಲೆ ನಾಯಕತ್ವ ಬೇಡವೇ ಬೇಡ. ಆ ಪದವಿಯನ್ನು ಅನುಭವಿಸುವುದು ಬಹಳ ಬಾಧಾಕರವಾದುದೆಂದು ನನಗೆ ಅನುಭವವಾಗಿದೆ. ಯಾವ ಮಂತ್ರವೇತ್ತನೋ, ಮಹಾ ಧೈರ್ಯಶಾಲಿಯಾದವನೋ ನಮ್ಮ ಮೇಲೆ ದಾಳಿ ಮಾಡಲು ಬರುವುದೂ, ನಾವು ಅಷ್ಟೆಲ್ಲಾ ಶಕ್ತಿ ಕುಯುಕ್ತಿಗಳಿದ್ದು ಕೂಡಾ ದಾಳಿಯನ್ನು ತಡೆದುಕೊಳ್ಳಲಾಗದೆ ಎಲ್ಲಿಗೋ ಓಡಿಹೋಗುವುದೂ, ಅದೇ ನಮಗೆ ಜೀವಿತವಾಯಿತು. ಅಂಥಾದ್ದು ಸಾಕೋಸಾಕಾಗಿ ಹೋಯಿತು. ಈ ದಿನದಿಂದ ನಾನು ಮಾನವರನ್ನು ಸೇವಿಸಿ ಬದುಕಬೇಕೆಂದಿದ್ದೇನೆ. ಮಾನವರಲ್ಲಿ ನೀವು ಅತ್ಯಂತ ಸಾಹಸವಂತರೆಂದು ಗೊತ್ತಾಗಿದೆ. ದಯಮಾಡಿ ನನ್ನನ್ನು ನಿಮ್ಮ ದಾಸನಾಗಿ ಸ್ವೀಕರಿಸಿಬಿಡಿ. ಬೇಕಾದರೆ ನಿಮ್ಮ ಹತ್ತಿರವಿರುವ ಇತರ ದಾಸರ ಮೇಲೆ, ಗುಲಾಮರ ಮೇಲೆ ನನ್ನನ್ನು ನಾಯಕನಾಗಿ ನಿಯಮಿಸಿ ಬಿಡಿರಿ" ಎಂದನು.

"ಭೇಷ್! ನಿನ್ನ ಭಕ್ತಿಗೂ ವಿನಯಕ್ಕೂ ತುಂಬಾ ಮೆಚ್ಚಿದೆನು. ಆದರೆ ನಿನ್ನನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ನಾನು ತೀರ್ಮಾನಿಸುವ ಸಮಸ್ಯೆಯಲ್ಲ. ಪದ್ಮಪಾದರೊಂದಿಗೆ ಮುಂದಾಗಿ ಮಾತಾಡಿ, ಅವರ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳಬೇಕು. ಈಗ ಹೆಚ್ಚು ಮಾತಿಗೆ ಅವಕಾಶವಿಲ್ಲ. ಇನ್ನು ಹೊರಡು" ಎಂದವನೇ ಪಿಂಗಳನು ಅವನಿಗೆ ಬೆನ್ನು ಹಾಕಿ ಹಿಂದಿರುಗಿದನು.

ಪಿಂಗಳನು ತನ್ನ ಪಿಶಾಚಿ ಗಾರ್ದಭ ವಾಹನದ ಮೇಲೆ ಏರುವುದರೊಳಗೆ ಭಲ್ಲೂಕಕೇತು ಆ ಕತ್ತೆಯ ನಡುವನ್ನು ಹಿಡಿದು, "ಪ್ರಭೂ, ನಿಮ್ಮಂಥ ದೊಡ್ಡ ಮನಸ್ಸಿನ ಗೌರವಶಾಲಿಗಳು ಇಂತಹ ಕ್ಷುದ್ರ ಪಿಶಾಚಿಯನ್ನು ವಾಹನವಾಗಿ ಉಪಯೋಗಿಸುವುದು ಏನೇನೂ ಚೆನ್ನಾಗಿಲ್ಲ, ಬಹಳ ಅವಮಾನವಿದು. ನನ್ನ ಹೆಗಲಿನ ಮೇಲೆ ಏರಿಕೊಳ್ಳಿರಿ. ಕ್ಷಣ ಮಾತ್ರದಲ್ಲಿ ನಿಮ್ಮನ್ನು ನಿಮ್ಮ ಗುರುಗಳ ಹತ್ತಿರ ಸೇರಿಸಿಬಿಡುತ್ತೇನೆ" ಎಂದು ಪಿಶಾಚಿ ಗಾರ್ದಭವನ್ನು ಒಂಟಿ ಕೈಯಿಂದ ಎತ್ತಿ ಗಿರಿಗಿರಿ ತಿರುಗಿಸಿ ಮರಗಳ ಮೇಲಿನಿಂದಾಗಿ ಆಕಾಶದ ಕಡೆಗೆ ಬೀಸಿ ಒಗೆದನು.

ಆ ಪಿಶಾಚ ಕತ್ತೆ ದಿಕ್ಕುಗಳೆಲ್ಲ ಕಿತ್ತು ಬೀಳುವ ಹಾಗೆ ಗಾಂಡ್ರಿಸುತ್ತಾ ಹಾರಿ ಹೋಗುವುದನ್ನು

ನೋಡಿ, ಭಲ್ಲೂಕಕೇತು ಗಹಗಹವೆಂದು ಗಟ್ಟಿಯಾಗಿ ನಕ್ಕು, "ಪ್ರಭೂ, ಇನ್ನು ಬನ್ನಿ. ನನ್ನ ಹೆಗಲ ಮೇಲೆ ಕುಳಿತುಕೊಳ್ಳಿರಿ" ಎಂದು ಮಂಡಿಯೂರಿ ಕುಳಿತನು.

ಪಿಂಗಳನು ಸ್ವಲ್ಪವೂ ಸಂದೇಹಪಡದೆ ಗೊಡ್ಡು ಕರಡಿಯ ಹಾಗಿರುವ ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಭಲ್ಲೂಕಕೇತು ಕೂಡಲೇ ಟಣ್ಣನೆ ಆಕಾಶಕ್ಕೆ ಹಾರಿ, ಕಣ್ಣುಮುಚ್ಚಿ ತೆರೆಯುವುದರೊಳಗೆ ಪಿಂಗಳನನ್ನು ಪದ್ಮಪಾದನಿರುವ ಸ್ಥಳಕ್ಕೆ ತಂದು ಇಳಿಸಿದನು.

ಪದ್ಮಪಾದನು ಭಲ್ಲೂಕಕೇತುವನ್ನು ನೋಡಿದ ಕೂಡಲೇ ಮಂದಹಾಸ ಬೀರತ್ತ, "ಚೆನ್ನಾಗಿರುವೆಯೇನೋ ಭಲ್ಲೂಕಕೇತೂ! ಅತ್ತ ನೋಡು!" ಎಂದು ನದಿಯಲ್ಲಿ ಉಕ್ಕುತ್ತಿರುವ ನೀರ ಮೇಲೆಯೂ, ಪಕ್ಕಗಳಲ್ಲಿರುವ ಗುಡ್ಡಗಳ ಕಲ್ಲುಗಳೆಡೆಯಲ್ಲಿಯೂ ಹೋರಾಡಿಕೊಂಡಿರುವ ಅಸಂಖ್ಯಾತ ರಕ್ಕಸ ರೂಪಗಳನ್ನು ತೋರಿಸಿ, "ಇವರೆಲ್ಲರೂ ಆಧಿಪತ್ಯಕ್ಕಾಗಿ ಒಬ್ಬರ ಕೊರಳನ್ನೊಬ್ಬರು ಕೊಯ್ದುಕೊಳ್ಳುತ್ತಿದ್ದಾರೆ. ನೀನು ಅವರ ಜಗಳವನ್ನು ನಿಲ್ಲಿಸಿ. ಅವರಿಗೆಲ್ಲ ನಾಯಕನಾಗಿ, ರಾಜನಾಗಿ ಇರಬೇಕೆಂದು ನಾನು ನಿನ್ನನ್ನು ಬಂಧಮುಕ್ತ ಮಾಡಿಸಿ ಇಲ್ಲಿಗೆ ಕರೆಸಿದ್ದೇನೆ. ಇದಕ್ಕೆ ನೀನೇ ಸರಿ" ಎಂದನು.

ಪದ್ಮಪಾದನ ಮಾತುಗಳನ್ನು ಕೇಳಿ ಭಲ್ಲೂಕಕೇತು ದಿಗಿಲುಬಿದ್ದು ಪಿಂಗಳನ ಮುಖವನ್ನು ದೈನ್ಯತೆಯಿಂದ ನೋಡಿದನು. ಪಿಂಗಳನು ಪದ್ಮಪಾದನೊಂದಿಗೆ ಭಲ್ಲೂಕಕೇತುವಿನ ಕೋರಿಕೆಯನ್ನು ವಿವರಿಸಿ ಹೇಳಿ, "ಇವನ ಆಶೆಯಂತೆ ನಾನು ಇವನನ್ನು ನನ್ನ ಸೇವಕನಾಗಿ ಇಟ್ಟುಕೊಳ್ಳಬೇಕೆಂದಿದ್ದೇನೆ. ಅದಕ್ಕೆ ನಿಮ್ಮ ಅನುಮತಿ ಬೇಕು" ಎಂದನು.

"ಅದಕ್ಕೆ ನನ್ನ ಅಭ್ಯಂತರವೇನಿಲ್ಲ ಪಿಂಗಳಾ. ಆದರೆ ಈ ಜಗಳಾಡಿಕೊಂಡಿರುವ ರಕ್ಕಸ ಗಣಗಳ ಸಂಗತಿ ಹೇಗೆ? ಅವುಗಳಿಗೆಲ್ಲ ಒಂದು ಅಂತ್ಯ ತೋರಿಸಲೇ ಬೇಕು" ಎಂದನು ಪದ್ಮಪಾದ.

"ಅಷ್ಟೇ ತಾನೇ? ಅವುಗಳ ಸಂಗತಿ ನನಗೆ ಬಿಡಿ! ನಾನೀಗಲೇ...." ಎಂದು ಭಲ್ಲೂಕಕೇತು ಏನೋ ಹೇಳಲಿರುವಾಗ, ಅಲ್ಲಿರುವ ರಕ್ಕಸ ಗಣಗಳಂತಹ ಪಿಶಾಚಿಗಳೆಲ್ಲಾ, ಒಂದೇ ಸಾರಿ ಆ ಪ್ರಾಂತವೆಲ್ಲವೂ ಮಾರ್ಮೊಳಗುವಂತೆ ಏಕಕಂಠದಿಂದ, "ಓಹೋಂ! ಭಲ್ಲೂಕಕೇತೂ! ಓಹೋಂ! ಓಹೋಂ!" ಎಂದು ಅರಚುತ್ತಾ, ಪದ್ಮಪಾದನಿರುವ ಸ್ಥಳಕ್ಕೆ ಓಡೋಡಿ ಬರತೊಡಗಿದವು.

ಭಲ್ಲೂಕಕೇತು ಏನು ಹೇಳಿದನೋ, ಏನೂ ಹೇಳದೆ ಅಷ್ಟಕ್ಕೇ ಬಾಯಿಮುಚ್ಚಿದನೋ ಗೊತ್ತಾಗಲಿಲ್ಲ.

(ಇನ್ನೂ ಇದೆ)

